# ಶಿವ ಶಕ್ತಿ

ದೇವನಹಳ್ಳಿ
ಚೆನ್ನಕೇಶವ ಆಚಾರ್ಯರ
ರೇಖಾಚಿತ್ರಗಳು

ಸಂಪುಟ-೧

ಕೆ.ವಿ. ಸುಬ್ರಹ್ಮಣ್ಯಂ




ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨

# ಶಿವ ಶಕ್ತಿ

## ದೇವನಹಳ್ಳಿ ಚೆನ್ನಕೇಶವ ಆಚಾರ್ಯರ ರೇಖಾಚಿತ್ರಗಳು

---

ಕೆ.ವಿ. ಸುಬ್ರಹ್ಮಣ್ಯಂ

ಪ್ರಧಾನ ಸಂಪಾದಕರು
ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ




ಕನ್ನಡ ಭವನ, ಜೆ.ಸಿ. ರಸ್ತೆ
ಬೆಂಗಳೂರು ೫೬೦ ೦೦೨

**SHIVA SHAKTHI**
A collection of drawings of Devanahalli Chennakeshav Acharya. Volume-1
Text and Notes Written and Drawings Edited by : **K.V. Subramanyam**, Bengaluru-26
Chief Editor : **Mahadevappa Shambhulingappa Shilpi**

*Published by*
**Indramma H.V.**
Registrar, Karnataka Shilpakala Academy, Kannada Bhavana
J.C. Road, Bengaluru - 560 002, Ph.: 080-22278725

Email: shilpakala.academy@gmail.com
Web : www.karnatakashilpakalaacademy.org

First Edition : 2016

Pages : viii + 136 = 144
Price : **100/-**
Used Paper : 80 GSM NS Book Printing
Copies : 1000

*Printed at*
**Ila Mudrana**, Bengaluru-560 026, Ph.: 080-26757159

---

**ಶಿವ ಶಕ್ತಿ**
ದೇವನಹಳ್ಳಿ ಚೆನ್ನಕೇಶವ ಆಚಾರ್ಯ ಅವರ ಚಿತ್ರಗಳ ಸಂಪುಟ–೧
ಪಠ್ಯ ಮತ್ತು ಟಿಪ್ಪಣಿ ಹಾಗೂ ಚಿತ್ರಗಳ ಸಂಪಾದನೆ **ಕೆ.ವಿ. ಸುಬ್ರಹ್ಮಣ್ಯಂ**
ಪ್ರಧಾನ ಸಂಪಾದಕರು: **ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ**

ಮೊದಲ ಮುದ್ರಣ : ೨೦೧೬
ಪುಟಗಳು : viii + ೧೩೬ = ೧೪೪
ಬೆಲೆ : ೧೦೦/–
ಪ್ರತಿಗಳು : ೧೦೦೦

ಬಳಸಿದ ಕಾಗದ : ೮೦ ಜಿಎಸ್‌ಎಂ ಎನ್‌ಎಸ್ ಬುಕ್ ಪ್ರಿಂಟಿಂಗ್

ಪ್ರಕಾಶಕರು
**ಇಂದ್ರಮ್ಮ ಹೆಚ್.ವಿ.**
ರಿಜಿಸ್ಟ್ರಾರ್
ಕರ್ನಾಟಕ ಶಿಲ್ಪಕಲಾ ಅಕಾಡೆಮಿ
ಮೇಲ್ಮನೆ ಕನ್ನಡ ಭವನ
ಜೆ.ಸಿ.ರಸ್ತೆ, ಬೆಂಗಳೂರು–೫೬೦ ೦೦೨

*ಮುದ್ರಣ*
**ಇಳಾ ಮುದ್ರಣ**
ನ್ಯೂ ಟಿಂಬರ್‌ಯಾರ್ಡ್ ಲೇಔಟ್
ಬೆಂಗಳೂರು – 560 026, ದೂರವಾಣಿ : 080–26757159

# ಅಧ್ಯಕ್ಷರ ನುಡಿ

**ಕ**ರ್ನಾಟಕ ಶಿಲ್ಪಕಲಾ ಅಕಾಡೆಮಿಯು ಪ್ರಸ್ತುತದಲ್ಲಿ ಬಹು ಪುರಾತನವಾದ ದೇವನಹಳ್ಳಿಯ ದಿ. ಶಿಲ್ಪಿ ಶ್ರೀ ಚೆನ್ನಕೇಶವ ಆಚಾರ್ಯರು ಸಂಗ್ರಹಿಸಿರುವ 'ದೇವತಾದಿಚಿತ್ರಸಾರ ಸಂಗ್ರಹ' ಎಂಬ ರೇಖಾಚಿತ್ರಗಳ ಪುಸ್ತಕವನ್ನು ನಮ್ಮ ಕಲಾ ಸಾಂಸ್ಕೃತಿಕ ಸಂಪತ್ತನ್ನು ಉಳಿಸುವ ಉದ್ದೇಶದಿಂದ ಮೂಲ ಹಸ್ತಪ್ರತಿಗಳನ್ನು ಪಡೆದು ಅದನ್ನು ಸಂಪಾದಕರಾದ ಶ್ರೀ ಕೆ.ವಿ. ಸುಬ್ರಹ್ಮಣ್ಯಂ ಅವರಿಗೆ ವಹಿಸಿ ರೇಖಾಚಿತ್ರಗಳನ್ನು ಮೂರು ಸಂಪುಟಗಳಲ್ಲಿ ಮುದ್ರಿಸಿ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡುವುದು ಮೊದಲ ಆದ್ಯತೆ ಆಗಿದೆ. ನಾನು ಸುಮಾರು ನಾಲ್ಕಾರು ಬಾರಿ ದೇವನಹಳ್ಳಿಯ ಶಿಲ್ಪಕಲಾ ಶಾಲೆಗೆ ಭೇಟಿ ನೀಡಿದಾಗ ಅವರು ನನಗೆ ದಿ. ಶಿಲ್ಪಿ ಶ್ರೀ ಚೆನ್ನಕೇಶವ ಆಚಾರ್ಯರು ಸಂಗ್ರಹಿಸಿರುವ ರೇಖಾಚಿತ್ರಗಳನ್ನು ತೋರಿಸಿದಾಗ ಆಶ್ಚರ್ಯವಾಯಿತು. ಕಾರಣ ಇಂತಹ ಅಪರೂಪದ ರೇಖಾಚಿತ್ರಗಳನ್ನು ಇದುವರೆವಿಗೂ ಯಾರು ಪ್ರಕಟಿಸಿಲ್ಲ ಎಂದು ಮನಸ್ಸಿಗೆ ಬೇಸರವಾಯಿತು. ರೇಖಾಚಿತ್ರಗಳಿರುವ ಪುಸ್ತಕಗಳಿಗೆ ಬೇಡಿಕೆ ದಿನೇ ದಿನೇ ವಿದ್ಯಾರ್ಥಿಗಳಿಂದ, ಕಲಾಸಕ್ತರಿಂದ, ಸಾರ್ವಜನಿಕರಿಂದ ಹೆಚ್ಚಾಗುತ್ತಿರುವುದನ್ನು ಕಂಡು ಶ್ರೇಷ್ಠವಾದ ರೇಖಾಚಿತ್ರಗಳ ಪುಸ್ತಕದ ಕೊರತೆ ಕಾಡುತ್ತಿದೆ ಎಂದು ಮನಗೊಂಡು, ಇಂತಹ ಅಪರೂಪದ ರೇಖಾಚಿತ್ರಗಳ ಪುಸ್ತಕವನ್ನು ಸೂಕ್ತ ಪಠ್ಯದೊಂದಿಗೆ ಮುದ್ರಿಸಿ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಿದರೆ ಇಂತಹ ಪುಸ್ತಕವನ್ನು ಕಲಾಭಿಮಾನಿಗಳು ಬಹಳ ಆತ್ಮೀಯವಾಗಿ ಸ್ವಾಗತಿಸುತ್ತಾರೆ ಎಂಬ ಆಶಾಭಾವ ಮೂಡಿತು.

ಸದರಿ ಪುಸ್ತಕವನ್ನು ಸಂಪಾದಿಸುತ್ತಿರವ ಶ್ರೀ ಕೆ.ವಿ. ಸುಬ್ರಹ್ಮಣ್ಯಂ ಅವರು ಬಹಳ ಸುಂದರವಾಗಿ ಮೂರು ಸಂಪುಟಗಳಲ್ಲಿ ಹೊರತರಲು ಶ್ರಮಿಸುತ್ತಿದ್ದಾರೆ. ಇದರ ಫಲವಾಗಿ ಮೊದಲ ಸಂಪುಟ 'ಶಿವ ಶಕ್ತಿ' ಹೊರಬರುತ್ತಿದೆ. ಸುಮಾರು ೧೨೦ ವರ್ಷದ ಹಿಂದೆ ದಿ. ಶಿಲ್ಪಿ ಶ್ರೀ ಚೆನ್ನಕೇಶವ ಆಚಾರ್ಯರು ರೇಖಿಸಿರುವ ರೇಖಾಚಿತ್ರಗಳು ಶಿಲ್ಪಕಲೆಯ ಸಂಪ್ರದಾಯ, ಪಾರಂಪರಿಕ ವೈಶಿಷ್ಟ್ಯತೆ, ಸಂಸ್ಕೃತಿ ಮುಂತಾದವುಗಳನ್ನು ಬಿಂಬಿಸುವ ರೀತಿಯಲ್ಲಿವೆ. ಇದನ್ನು ಇಂದಿಗೂ ಕಾಪಾಡಿಕೊಂಡು ಬರುತ್ತಿರುವುದು ನಿಜಕ್ಕೂ ಸ್ವಾಗತಾರ್ಹ. ಇಂತಹ ಪುರಾತನ ಅಪರೂಪದ ರೇಖಾಚಿತ್ರದ ಪುಸ್ತಕವನ್ನು ನನ್ನ ಅಧಿಕಾರಾವಧಿಯಲ್ಲಿ ಮುದ್ರಿಸುತ್ತಿರುವುದಕ್ಕೆ ಹೆಮ್ಮೆಯೆನಿಸುತ್ತದೆ. ನನಗೆ ಪುಸ್ತಕ ಮುದ್ರಿಸಲು ಹಸ್ತಪ್ರತಿ ನೀಡಿ ಸಹಕರಿಸಿದ ದಿ. ಶಿಲ್ಪಿ ಶ್ರೀ ಎ.ಸಿ. ಹನುಮಂತಾಚಾರ್ಯರ ಧರ್ಮಪತ್ನಿಯವರಾದ ಶ್ರೀಮತಿ ಸರೋಜಾದೇವಿ ಆಚಾರ್ಯ ಹಾಗೂ ಅವರ ಮಕ್ಕಳಿಗೆ ಮತ್ತು ಶಿಲ್ಪಕಲಾ ಟ್ರಸ್ಟ್, ದೇವನಹಳ್ಳಿಯ ಎಲ್ಲಾ ಪದಾಧಿಕಾರಿಗಳಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಈ ರೇಖಾಚಿತ್ರ ಪುಸ್ತಕದ ಮೂರು ಸಂಪುಟದ ಸಂಪಾದಕರಾಗಿರುವ ಶ್ರೀ ಕೆ.ವಿ. ಸುಬ್ರಹ್ಮಣ್ಯಂ ಅವರಿಗೆ ಮತ್ತೊಮ್ಮೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಅದೇ ರೀತಿ ಈ 'ಶಿವ ಶಕ್ತಿ' ಸಂಪುಟದ ಮುದ್ರಣಕ್ಕೆ ಸಹಕರಿಸಿದ ಅಕಾಡೆಮಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ, ಅಕಾಡೆಮಿಯ ರಿಜಿಸ್ಟ್ರಾರ್ ಆದ ಶ್ರೀಮತಿ ಇಂದ್ರಮ್ಮ. ಹೆಚ್.ವಿ. ಅವರಿಗೂ ಅಕಾಡೆಮಿಯ ಸಿಬ್ಬಂದಿಗಳಿಗೂ, ಈ ಸಂಪುಟವನ್ನು ಅಂದವಾಗಿ ಮುದ್ರಣ ಮಾಡುತ್ತಿರುವ ಮಾಲೀಕರು, ಇಳಾ ಮುದ್ರಣ, ಬೆಂಗಳೂರು ಇವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ**
ಅಧ್ಯಕ್ಷರು
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ಪ್ರಕಾಶಕರ ನುಡಿ

**ಕ**ರ್ನಾಟಕ ಶಿಲ್ಪಕಲಾ ಅಕಾಡೆಮಿಯು ಪ್ರಸ್ತುತದಲ್ಲಿ ಬಹು ಪುರಾತನವಾದ ದೇವನಹಳ್ಳಿಯ ದಿ. ಶಿಲ್ಪಿ ಶ್ರೀ ಚೆನ್ನಕೇಶವ ಆಚಾರ್ಯರು ಸಂಗ್ರಹಿಸಿರುವ ದೇವತಾದಿ ಚಿತ್ರಸಾರ ಸಂಗ್ರಹ ಎಂಬ ರೇಖಾಚಿತ್ರಗಳ ಪುಸ್ತಕವನ್ನು ನಮ್ಮ ಕಲಾ ಸಾಂಸ್ಕೃತಿಕ ಸಂಪತ್ತನ್ನು ಉಳಿಸುವ ಉದ್ದೇಶದಿಂದ ಮೂಲ ಹಸ್ತಪ್ರತಿಗಳನ್ನು ಪಡೆದು ಅದನ್ನು ಸಂಪಾದಕರಾದ ಶ್ರೀ ಕೆ.ವಿ.ಸುಬ್ರಹ್ಮಣ್ಯಂ ಅವರಿಗೆ ವಹಿಸಿ ರೇಖಾಚಿತ್ರಗಳನ್ನು ಮೂರು ಸಂಪುಟಗಳಲ್ಲಿ ಮುದ್ರಿಸಿ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡಲಾಗುತ್ತಿದೆ. ರೇಖಾಚಿತ್ರಗಳಿರುವ ಪುಸ್ತಕಗಳಿಗೆ ಬೇಡಿಕೆ ದಿನೇ ದಿನೇ ವಿದ್ಯಾರ್ಥಿಗಳಿಂದ, ಕಲಾಸಕ್ತರಿಂದ, ಸಾರ್ವಜನಿಕರಿಂದ ಹೆಚ್ಚಾಗುತ್ತಿರುವುದನ್ನು ಕಂಡು ಶ್ರೇಷ್ಠವಾದ ರೇಖಾಚಿತ್ರಗಳ ಪುಸ್ತಕದ ಕೊರತೆ ಇಂದಿನ ಪೀಳಿಗೆಗೆ ಕಾಡುತ್ತಿದೆ. ಇಂತಹ ಅಪರೂಪದ ರೇಖಾಚಿತ್ರಗಳ ಪುಸ್ತಕವನ್ನು ಮುದ್ರಿಸಿ ಸಾರ್ವಜನಿಕರಿಗೆ ಲಭ್ಯವಾಗುವಂತೆ ಮಾಡುತ್ತಿರುವುದರಿಂದ ಕಲಾಭಿಮಾನಿಗಳಿಗೆ ಹಾಗೂ ವಿದ್ಯಾರ್ಥಿಗಳಿಗೆ ತುಂಬಾ ಉಪಯುಕ್ತವಾಗುತ್ತದೆ.

ಸದರಿ ಪುಸ್ತಕವನ್ನು ಸಂಪಾದಿಸುತ್ತಿರುವ ಶ್ರೀ ಕೆ.ವಿ. ಸುಬ್ರಹ್ಮಣ್ಯಂ ಅವರು ಬಹಳ ಸುಂದರವಾಗಿ ಮೂರು ಸಂಪುಟಗಳಲ್ಲಿ ಹೊರತರಲು ಶ್ರಮಿಸುತ್ತಿದ್ದಾರೆ. ಇದರ ಫಲವಾಗಿ ಮೊದಲ ಸಂಪುಟವು ಹೊರಬರುತ್ತಿದೆ. ಪುಸ್ತಕ ಮುದ್ರಿಸಲು ಹಸ್ತಪ್ರತಿ ನೀಡಿ ಸಹಕರಿಸಿದ ದಿ. ಶಿಲ್ಪಿ ಶ್ರೀ ಹನುಮಂತ ಆಚಾರ್ಯರ ಧರ್ಮಪತ್ನಿಯವರಾದ ಶ್ರೀಮತಿ ಸರೋಜಾದೇವಿ ಆಚಾರ್ಯ ಹಾಗೂ ಅವರ ಮಕ್ಕಳಿಗೆ ಮತ್ತು ಶಿಲ್ಪಕಲಾ ಟ್ರಸ್ಟ್, ದೇವನಹಳ್ಳಿಯ ಎಲ್ಲಾ ಪದಾಧಿಕಾರಿಗಳಿಗೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಈ ರೇಖಾಚಿತ್ರ ಪುಸ್ತಕದ ಮೂರು ಸಂಪುಟದ ಸಂಪಾದಕರಾಗಿರುವ ಶ್ರೀ ಕೆ.ವಿ. ಸುಬ್ರಹ್ಮಣ್ಯಂ ಅವರಿಗೆ ಮತ್ತೊಮ್ಮೆ ಅಭಿನಂದನೆಗಳನ್ನು ಸಲ್ಲಿಸುತ್ತೇನೆ. ಅದೇ ರೀತಿ ಈ ಪುಸ್ತಕದ ಮುದ್ರಣಕ್ಕೆ ಸಹಕರಿಸಿದ ಅಕಾಡೆಮಿಯ ಅಧ್ಯಕ್ಷರಾದ ಶ್ರೀ ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿ ಅವರಿಗೂ, ಅಕಾಡೆಮಿಯ ಕಾರ್ಯಕಾರಿ ಸಮಿತಿ ಸದಸ್ಯರಿಗೂ, ಅಕಾಡೆಮಿಯ ಸಿಬ್ಬಂದಿಗಳಿಗೂ, ಈ ಪುಸ್ತಕವನ್ನು ಅಂದವಾಗಿ ಮುದ್ರಿಸಿದ ಮಾಲೀಕರು, ಇಳಾ ಮುದ್ರಣ, ಬೆಂಗಳೂರು ಇವರಿಗೂ ತುಂಬು ಹೃದಯದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

**ಇಂದ್ರಮ್ಮ ಹೆಚ್.ವಿ.**
ರಿಜಿಸ್ಟ್ರಾರ್
ಕರ್ನಾಟಕ ಶಿಲ್ಪಕಲಾ ಅಕಾಡೆಮಿ

# ನಿಮ್ಮೊಂದಿಗೆ...

**ಭಾ**ರತೀಯ ಮಕ್ಕಳ ಬಾಲ್ಯವೇ ಪುರಾಣಗಳ ವೈಭವಯುತ ಪಾತ್ರಧಾರಿಗಳನ್ನು 'ನೋಡುವಿಕೆ' 'ಕೇಳುವಿಕೆ'ಗಳಿಂದ ತುಂಬಿಹೋಗಿರುತ್ತದೆ. ಮನೆಯಲ್ಲಿ ದೇವ-ದೇವಿಯರ ಪೂಜಾಪಟಗಳು, ಹಳ್ಳಿ ಹಳ್ಳಿಗಳ ನಡುವೆ ಆಕಾಶಕ್ಕೆ ಗುರಿಯಿಟ್ಟ ಗೋಪುರಗಳ ದೇಗುಲಗಳು. ದೇವತಾ ರೂಪಗಳ ಉಬ್ಬು ಶಿಲ್ಪಗಳು ಒಳಗಿನ, ಹೊರಗಿನ ಅವಕಾಶಗಳನ್ನು ತುಂಬಿಕೊಂಡಿದ್ದರೆ ಗರ್ಭಗುಡಿಯಲ್ಲಿನ ಶಿಲಾಮೂರ್ತಿಗಳು. ಉತ್ಸವದ ಕಂಚಿನ ಶಿಲ್ಪಗಳ ಆಕರ್ಷಣೆ ಅಷ್ಟಿಷ್ಟಲ್ಲ.

ಈ ರವಿಗ್ರಹಗಳಿಗೆ ನಮ್ಮ ವಿಷ್ಣು, ಗರುಡ, ಅಗ್ನಿ ಇತ್ಯಾದಿ ಪುರಾಣಗಳು, ಚಿತ್ರಸೂತ್ರ, ಚಿತ್ರಲಕ್ಷಣ, ಸಮರಾಂಗಣ ಸೂತ್ರಧಾರ, ಶುಕ್ರನೀತಿಸಾರ ಇತ್ಯಾದಿ ಮಧ್ಯಕಾಲೀನ ಪಠ್ಯಗಳ ಎಲ್ಲ ವಿವರಗಳು ಪೂರಕ ಭೂಮಿಕೆಯನ್ನು ನೀಡುತ್ತವೆ. ಈ ಮೂಲದ ಶಿಲ್ಪ ಸೃಷ್ಟಿ ನಮ್ಮಲ್ಲಿ ಶತಮಾನಗಳಿಂದ ಗುರುಕುಲ ಪದ್ಧತಿಯಲ್ಲಿ ನಡೆದು ಬಂದಿದೆ. ಸಂಪ್ರದಾಯ ಶಿಲ್ಪಕಲಾ ಸೃಷ್ಟಿಯು ನಿರಂತರವಾಗಿ ಬೆಳೆದು ಬಂದಿದೆ. ಸಾವಿರಾರು ಶಿಲ್ಪಿಗಳು ರಾಜ್ಯದಲ್ಲಿ ಇದ್ದಾರೆ. ಶಿವಾರಪಟ್ಟಣದಂತಹ ಸಂಪ್ರದಾಯ ಶಿಲ್ಪಿಗಳ ಹಳ್ಳಿಯು ೨೦೧೬ರಲ್ಲಿಯೂ ತೀವ್ರ ಚಟುವಟಿಕೆಯಿಂದ ಕೂಡಿದ್ದಿತು. ದೇವನಹಳ್ಳಿಯ ಶಿಲ್ಪ ಕಲಾ ಶಾಲೆಯೂ ಈ ಹಿನ್ನೆಲೆಯಲ್ಲಿ ಗಣನೀಯ ಪ್ರಾಮುಖ್ಯತೆಯನ್ನು ಹೊಂದಿದೆ. ಶತಮಾನದ ಹಿಂದೆ ಅಲ್ಲಿದ್ದು ಶಿಲ್ಪಕಲೆಯನ್ನು ಕಲಿಸಿದ ಚೆನ್ನಕೇಶವ ಆಚಾರ್ಯರ ನೂರಾರು ರೇಖಾಚಿತ್ರಗಳನ್ನು ೨೦೧೬ರ ಸಂದರ್ಭದಲ್ಲಿಯೂ ಸಂರಕ್ಷಿಸಿಕೊಂಡು ಬಂದಿರುವ ಶ್ರೀಮತಿ ಸರೋಜಾದೇವಿ ಆಚಾರ್ಯ ಹಾಗೂ ಅವರ ಮಕ್ಕಳು ಮತ್ತು ಶಿಲ್ಪ ಕಲಾ ಟ್ರಸ್ಟ್‌ನ ಶಿಲ್ಪಿ ಕೆ.ಬಿ. ಶಂಕರನಾರಾಯಣ ಮತ್ತು ಇತರ ಮಿತ್ರರಿಗೆ ನಾವು ಕೃತಜ್ಞರಾಗಿರಬೇಕು. ಕರ್ನಾಟಕ ಶಿಲ್ಪಕಲಾ ಅಕಾಡೆಮಿಯು ಈ ರೇಖಾಚಿತ್ರಗಳನ್ನು ಮೂರು ಸಂಪುಟಗಳಲ್ಲಿ ಪ್ರಕಟಿಸುತ್ತಿರುವುದು ಒಂದು ವಿಶೇಷ ಸಂದರ್ಭ ಸೃಷ್ಟಿಯೇ ಸರಿ. ಅಧ್ಯಕ್ಷರು ಮಹಾದೇವಪ್ಪ ಶಂಭುಲಿಂಗಪ್ಪ ಶಿಲ್ಪಿಯವರ ಆಶಯದಂತೆ ಈ ಸಂಪುಟಗಳು ಪ್ರಕಟಗೊಳ್ಳುತ್ತಿವೆ. ಮೊದಲ ಸಂಪುಟ 'ಶಿವ ಶಕ್ತಿ' ನಿಮ್ಮ ಕೈಯಲ್ಲಿದೆ. ದೇವನಹಳ್ಳಿಯ ಶಿಲ್ಪಕಲಾ ಶಾಲೆಗೆ ೧೯೮೦ರ ದಶಕದಲ್ಲಿ ಹನುಮಂತಾಚಾರ್ಯರ ಸಂದರ್ಭದಲ್ಲಿ ಅವರಲ್ಲಿ ಕಲಿಯಲು ಪದೇ ಪದೇ ಭೇಟಿ ನೀಡಿದ ನಾನು ತೀವ್ರತೆಯಿಂದ ತೊಡಗಿಕೊಳ್ಳಲು ಆಗಿರಲಿಲ್ಲ. ಆದರೂ ಶಿಲ್ಪಕಲಾ ಶಾಲೆಯ ಸಂಪರ್ಕ ಇದ್ದಿತು. ಸಂಪ್ರದಾಯ ಶಿಲ್ಪದ ಪ್ರೀತಿಯೂ ಬೆಳೆಯಿತು. ಆದರೆ ಆಗ ನೋಡಲು ಆಗದ ಚೆನ್ನಕೇಶವ ಆಚಾರ್ಯರ ರೇಖಾ ಚಿತ್ರಗಳನ್ನು ಈಗ ನೋಡುವ ಸಂದರ್ಭ ಒದಗಿದೆ. ಈ ಮೊದಲ ಸಂಪುಟವು ರೂಪುಗೊಳ್ಳಲು ಅಕಾಡೆಮಿಯ ಅಧ್ಯಕ್ಷರೇ ಅಲ್ಲದೆ ರಿಜಿಸ್ಟ್ರಾರ್ ಇಂದ್ರಮ್ಮ ಹೆಚ್.ವಿ. ಹಾಗೂ ಇತರ ಸದಸ್ಯ ಮಿತ್ರರಿಗೆ ನಾನು ಆಭಾರಿಯಾಗಿದ್ದೇನೆ. ದೇವನಹಳ್ಳಿ ಶಿಲ್ಪಕಲಾ ಶಾಲೆಯ ಶ್ರೀಮತಿ ಸರೋಜಮ್ಮ ಮತ್ತು ಮಕ್ಕಳು ಹಾಗೂ ಶಿಲ್ಪಕಲಾ ಟ್ರಸ್ಟ್‌ನ ಕೆ.ಬಿ. ಶಂಕರ ನಾರಾಯಣ ಮತ್ತು ಮಿತ್ರರು, ಈ ಪುಟ್ಟ ಸಂಪುಟವು ಸುಂದರವಾಗಿ ಮೂಡಿ ಬರಲು ಶ್ರಮಿಸಿದ್ದಾರೆ. ಇಳಾ ಮುದ್ರಣದ ಮಿತ್ರರು ಮತ್ತು ಶಿಲ್ಪಿ ವೆಂಕಟಾಚಲಪತಿ ಹಲವು ರೀತಿಗಳಲ್ಲಿ ನನಗೆ ನೆರವಾಗಿದ್ದಾರೆ. ಇವರೆಲ್ಲರಿಗೂ ನಾನು ಋಣಿ. ನಿಮ್ಮ ಹಲವು 'ಓದುವಿಕೆ' ಮತ್ತು 'ನೋಡುವಿಕೆ'ಗಳೂ ಈ ಸಂಪುಟದ ಉದ್ದೇಶವನ್ನು ವಿಸ್ತರಿಸಬಲ್ಲದು.

೨೦೧೬ —ಕೆ.ವಿ. ಸುಬ್ರಹ್ಮಣ್ಯಂ

# ದೇವನಹಳ್ಳಿಯ ಚೆನ್ನಕೇಶವ ಆಚಾರ್ಯ

**ಬೆ**ಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿಯು ಐತಿಹಾಸಿಕ, ಸಾಂಸ್ಕೃತಿಕ ಕಾರಣಗಳಿಗಾಗಿ ಖ್ಯಾತವಾಗಿದೆ. ಮಾಗಡಿ ಕೆಂಪೇಗೌಡ, ಹೈದರಾಲಿ ಮೊದಲಾದವರು ಈ ಊರಿನೊಂದಿಗೆ ಸಂಬಂಧ ಸಾಧಿಸಿದ್ದರು. ಟಿಪ್ಪುಸುಲ್ತಾನನ ಜನ್ಮಸ್ಥಳವೂ ಈ ದೇವನಹಳ್ಳಿಯೇ ಆಗಿದೆ. ವಿಶಿಷ್ಟ ಕೋಟೆ, ಸುತ್ತಲಿನ ಕಂದಕ, ಆಕರ್ಷಕ ಕೆರೆ ಇತ್ಯಾದಿಗಳು ಅಂದಿನ ದಿನಗಳ ಚಹರೆಗಳನ್ನು ಹೊಂದಿವೆ. ಬಹುಮುಖ್ಯವಾಗಿ ವೇಣುಗೋಪಾಲ ಸ್ವಾಮಿ ದೇವಾಲಯ ೨೦೧೫ರ ಸಂದರ್ಭದಲ್ಲಿಯೂ ತನ್ನ ಐತಿಹಾಸಿಕ, ಸಾಂಸ್ಕೃತಿಕ ಹೊಳಹುಗಳಿಂದಾಗಿ ಗಮನಿಸುವಂತಿತ್ತು.

ದೇವನಹಳ್ಳಿಯ ಕೋಟೆ, ದೇವಾಲಯಗಳ ನಿರ್ಮಾಣದ ಹಿಂದಿನ ಕರಕುಶಲಿಗಳು ಅಸಾಮಾನ್ಯರೇ ಆಗಿದ್ದರು. ಆ ಮನೆತನದ ಶಿಲ್ಪಿಗಳು ೨೦೧೫ರ ಸಂದರ್ಭದಲ್ಲಿಯೂ ಶಿಲ್ಪಕಲಾ ಶಾಲೆಯ ಆಶ್ರಯವನ್ನು ಅಗತ್ಯ ಶಿಲ್ಪಿಗಳಿಗೆ ನೀಡುತ್ತ, ಸಂಪ್ರದಾಯ ಶಿಲ್ಪ ಸೃಷ್ಟಿಗೆ ಪೂರಕ ವಾತಾವರಣ ನಿರ್ಮಿಸಿದ್ದರು.

ಸುಮಾರು ಕ್ರಿ.ಶ. ೧೭೦೦ರ ಸಂದರ್ಭ. ದೇವನಹಳ್ಳಿಯ ಪಾಳೆಯಗಾರ ಮಲ್ಲಭೈರೇಗೌಡ ಮತ್ತು ದೇವೇಗೌಡರು ಆ ಕಾಲಕ್ಕೆ ಪ್ರಸಿದ್ಧ ಶಿಲ್ಪಿಗಳಾಗಿದ್ದ ಶಿಲ್ಪಿ ಸಿದ್ಧಾಂತಿ ವೇದಾಂತಂ ಗೋಪಾಲ ಆಚಾರ್ಯ ಮತ್ತು ಅವರ ಸೋದರ ರಾಮ ಆಚಾರ್ಯರವರುಗಳನ್ನು ದೇವನಹಳ್ಳಿಗೆ ಸ್ವಾಗತಿಸಿದರು. ಈ ಶಿಲ್ಪಿಗಳಿಂದ ದೇವನಹಳ್ಳಿಯ ಕಲ್ಲಿನಕೋಟೆ, ಗೋಪಾಲಸ್ವಾಮಿ ದೇವಾಲಯಗಳು ಕಟ್ಟಲ್ಪಟ್ಟವು. ಕೃಷ್ಣಮಾಚಾರ್ಯರೆಂಬ ಈ ಮನೆತನದ ಶಿಲ್ಪಿಯೊಬ್ಬರು "ದೇಶಪರ್ಯಟನೆಗೆಂದು ಹೊರಟವರು ಅಲ್ಲಲ್ಲಿ ತಮ್ಮ ಕೃತಿಗಳನ್ನು ರಚಿಸಿದ್ದಾರೆ. ಇವರ ಪಾಂಡಿತ್ಯವನ್ನು ಮೆಚ್ಚಿದ ತಿರುವಾಂಕೂರು ಮಹಾರಾಜರು ಇವರಿಗೆ "ಶಿಲ್ಪಸಿದ್ಧಾಂತಿ" ಎಂಬ ಬಿರುದನ್ನು ಕೊಟ್ಟು ಗೌರವಿಸಿದರೆಂದು ತಿಳಿದುಬರುತ್ತದೆ. ಇವರ ಮಕ್ಕಳಾದ ಹನುಮಂತಾಚಾರ್ಯರ ಮಕ್ಕಳು ಮೂವರೂ ಯಥಾವತ್ತಾಗಿ ಶಾಸ್ತ್ರವೇತ್ತರು, ಕುಶಲ ಕರ್ಮಿಗಳು. ಒಬ್ಬರು ಜನ್ಮಾಂಧರಾದರೂ ಶಾಸ್ತ್ರಜ್ಞರಿದ್ದರು. ಇನ್ನಿಬ್ಬರಾದ ತಿರುವೆಂಕಟಾಚಾರ್ಯ ಮತ್ತು ಚೆನ್ನಕೇಶವ ಆಚಾರ್ಯರು ಶಿಲ್ಪಶಾಸ್ತ್ರ ಪರಿಣಿತರು. ದಕ್ಷಿಣ ದೇಶದಾದ್ಯಂತ ಇವರು ಶಿಲ್ಪಕೃತಿಗಳನ್ನು ಒದಗಿಸಿ ಕೊಟ್ಟಿದ್ದಾರೆ. ಚಿತ್ರದುರ್ಗ ಜಿಲ್ಲೆಯಲ್ಲಿಯೇ ಪ್ರಾಯಶಃ ನೂರಕ್ಕೂ ಹೆಚ್ಚಿನ ಸಂಖ್ಯೆಯಲ್ಲಿ ಅವರು ಕಡೆದಿರುವ ಕಲಾಮೂರ್ತಿಗಳಿವೆ. ದಾವಣಗೆರೆಯಲ್ಲಿರುವ ಶ್ರೀ ಕನ್ನಿಕಾಪರಮೇಶ್ವರಿ ವಿಗ್ರಹ, ರಾಜೇನಹಳ್ಳಿಯವರ ರಾಮಮಂದಿರದ ಶ್ರೀ ರಾಮಮೂರ್ತಿ ವಿಗ್ರಹ, ಮೊದಲಾದ ಸುಂದರ ಮೂರ್ತಿಗಳು ಅವರ ರಚನೆಯದು. ಚೆನ್ನಕೇಶವ ಆಚಾರ್ಯರಿಗೆ ಶಿಲ್ಪಸಿದ್ಧಾಂತಿ, ಶಿಲ್ಪವಲ್ಲಭ, ಶಿಲ್ಪವಿದ್ವಾನ್ ಮೊದಲಾದ ಬಿರುದುಗಳಿದ್ದವು." (ಬಿ.ಎ.ಆರ್. ಬೆಂಗಳೂರಿನ ಕಲಾಮಂದಿರದ 'ಕಲಾ' ಪತ್ರಿಕೆ. ಸಂಪಾದಕರು: ಅ.ನ. ಸುಬ್ಬರಾಯರು.) ಈ ಚೆನ್ನಕೇಶವ ಆಚಾರ್ಯರ ಮಕ್ಕಳೇ ಎ.ಸಿ. ಹನುಮಂತ ಆಚಾರ್ಯ. ಬಾಲ್ಯದಲ್ಲಿಯೇ ತಂದೆಯನ್ನು ಕಳೆದುಕೊಂಡರೂ ತಾಯಿಯಿಂದ ಕಲಿತು ತಂದೆಯ ಹಾದಿಯಲ್ಲಿ ಮುನ್ನಡೆದರು. ನೂರಾರು ಪುಟಗಳಲ್ಲಿ ಚೆನ್ನಕೇಶವ ಆಚಾರ್ಯರು ರೇಖಿಸಿಟ್ಟಿದ್ದ ರೇಖಾಚಿತ್ರಗಳು ಎ.ಸಿ. ಹನುಮಂತ ಆಚಾರ್ಯರನ್ನೇ ಅಲ್ಲದೆ ೨೦೧೫ರ ಸಂದರ್ಭದಲ್ಲಿಯೂ ಅಲ್ಲಿ ಕಲಿಯುತ್ತಿದ್ದವರಿಗೆ ಉಪಯುಕ್ತವಾಗಿದ್ದವು. ಪ್ರಸ್ತುತ ಪ್ರಕಟಣೆಯಲ್ಲಿ ನೀವು ನೋಡುತ್ತಿರುವ ದೈವೀಕ ರೇಖಾಧ್ಯಾನದಂತಹ ರೇಖಾಚಿತ್ರಗಳು ಶತಮಾನದ ಅಂತರದಲ್ಲಿಯೂ, ಸಂರಕ್ಷಣೆಯ ಸಮಸ್ಯೆಗಳನ್ನು ಮೀರಿ ಉಳಿದುಕೊಂಡಿರುವುದು ಗಮನಾರ್ಹ. ಈ ಹಿನ್ನೆಲೆಯಲ್ಲಿ ಚೆನ್ನಕೇಶವ ಆಚಾರ್ಯರ ಕುಟುಂಬದ ಪರಂಪರೆಯ ಪ್ರೀತಿ ಮತ್ತು ಗೌರವಗಳು ಎದ್ದು ಕಾಣುತ್ತವೆ. ಲಭ್ಯ ರೇಖಾಚಿತ್ರಗಳನ್ನು ಸೂಕ್ತ ರೀತಿಯಲ್ಲಿ ಮೂರು ಪುಟ್ಟ ಪುಟ್ಟ ಸಂಪುಟಗಳಲ್ಲಿ ಸಂಗ್ರಹಿಸಲಾಗಿದೆ. ಪ್ರಸ್ತುತ 'ಶಿವ ಶಕ್ತಿ' ಮೊದಲ ಸಂಪುಟದಲ್ಲಿ ಶಿವ ಶಕ್ತಿ ಸಂಬಂಧಿತ ರೇಖಾಚಿತ್ರಗಳಿವೆ. ❑

# ಪರಿವಿಡಿ

# ೧. ಸಂಪ್ರದಾಯ ಶಿಲ್ಪದ ರೂಪ ಕಲ್ಪನೆ ಮತ್ತು ರೇಖಾಧ್ಯಾನ

ನಮ್ಮ ಸುತ್ತಲಿನ ಸೃಷ್ಟಿಯ ಸೂಕ್ಷ್ಮ ತಾತ್ವಿಕತೆಯನ್ನು ಮತ್ತು ಅದರ ನಿಗೂಢ ಆಂತರ್ಯದ ಆದಿ ಅಂತ್ಯಗಳನ್ನು ವಿವರಿಸಲು ಸಾಧ್ಯವಾಗದೆ ನಮ್ಮ ಪುರಾತನರು ಗೊಂದಲಗೊಂಡಿರುವುದುಂಟು. ಐತಿಹ್ಯಗಳನ್ನು ಸೃಷ್ಟಿಸಿ ರೂಪವನ್ನು ಕಲ್ಪಿಸಿ ಮೂರ್ತಿ ರೂಪದಲ್ಲಿ "ರೂಪಂ ರೂಪ ವಿವರ್ಜಿತಸ್ಯ" ಎಂದು ದರ್ಶಿಸಿದ ನಮ್ಮ ದಾರ್ಶನಿಕರು ಜನಸಾಮಾನ್ಯರಿಗೂ ನಿಲುಕುವಂತಹ ಕಥಾ ರೂಪಗಳನ್ನು ನೀಡಿದರು.

ಬಹುದೇವತಾ ಕಲ್ಪನೆಯ ನಮ್ಮ ನಿಗೂಡದೈವೀಕ ಪೂಜಾ[೧] ಪರಂಪರೆಯು ಶತಮಾನಗಳಿಂದ ಮುನ್ನಡೆದಿದೆ. ಋಗ್ವೇದದ (೧.೮೯.೧) "ಕಲ್ಯಾಣಕರ ಪ್ರೇರಣೆಗಳು ನಮಗೆ ಎಲ್ಲೆಡೆಯಿಂದಲೂ ಬರಲಿ, ಯಾರಿಗೂ ಕೇಡು ಮಾಡದಿರುವಂತಹ ಅನಿರ್ಬಾಧಿತ ಮತ್ತು ವಿಚ್ಛೆದ್ರಕ ಶಕ್ತಿಗಳ ವಿರುದ್ಧ ವಿಜಯಿಯಾಗಿರುವಂತಹ ದೇವತೆಗಳು ನಮ್ಮ ವರ್ಧನೆಯ ಪರವಾಗಿ ಇರಲಿ. ನಮ್ಮಿಂದ ಎಂದೂ ದೂರವಾಗದಿರಲಿ ದಿನದಿನವೂ ನಮ್ಮನ್ನು ಕಾಪಾಡುತ್ತಿರಲಿ,"[೨] ಎಂಬ ದೃಷ್ಟಿಯ ಪರಂಪರೆ ನಮ್ಮದು. ತೈತ್ತಿರೀಯ ಆರಣ್ಯಕದಲ್ಲಿ "ನಾವು ನಮ್ಮ ಬಂಧು ಬಾಂಧವರೊಂದಿಗೆ ನೂರು ವರ್ಷ ಸಂತಸದಿಂದ ಇರುವಂತಾಗಲಿ, ನೂರು ವರ್ಷ ವೈಭವದಿಂದ ಬಾಳುವಂತಾಗಲಿ, ನೂರುವರ್ಷ ಮಂಗಳಕರವಾದದ್ದನ್ನು ಕೇಳುವಂತಾಗಲಿ, ನೂರು ವರ್ಷ ಮಧುರ ಮಾತುಗಳನ್ನು ಆಡುವಂತಾಗಲಿ, ಅಸುರೀ ಶಕ್ತಿಗಳಿಂದ ಸೋಲದೆಯೇ ನಾವು ನೂರು ವರ್ಷ ಬಾಳುವಂತಾಗಲಿ. ನಾವು ನೂರು ವರ್ಷಗಳ ವರೆಗೆ ಸೂರ್ಯನತ್ತ ದೃಷ್ಟಿ ಬೀರುತ್ತ ಸಂತೋಷದಿಂದ ಇರಲು ಬಯಸುತ್ತೇವೆ"[೩] ಎಂಬ ಆಶಯ ಪ್ರಾರ್ಥನೆಗಳೆಲ್ಲವೂ ನಮ್ಮ ಪರಮ ಆನಂದದ ಪ್ರಾಪ್ತಿ ಹಾಗೂ ಪೋಷಣೆಗಾಗಿಯೇ ಮೂಡಿಬಂದಿವೆ. ನಮ್ಮ ಪರಮ ಆನಂದದ ಪ್ರಾಪ್ತಿಗಾಗಿ ನಮ್ಮಲ್ಲಿ ವಿಶ್ವಾತೀತ ಶಕ್ತಿಗಳು ಸಂಚಯನಗೊಂಡು ಪ್ರಕಟಗೊಳ್ಳ ಬೇಕಾಗಿರುವುದರಿಂದ ಮಾನವನು ದೇವತೆಗಳತ್ತ ಗಮನಹರಿಸಿ ಬಹಳದೂರ ನಡೆದು ಬಂದಿದ್ದಾನೆ; ಅದೊಂದು ನಿರಂತರ ಪಯಣ. ಪರಮ ಅಥವಾ ಅಂತಿಮ ಸತ್ಯವಾದ ಆತ್ಮನು, ಪರಮಾತ್ಮನು ಅಂತರಾತ್ಮನು ಅಥವಾ ವಿಶ್ವಾತ್ಮನ ಜತೆಗೆ ಬೇರ್ಪಡಿಸಲಾಗದ ಸಂಬಂಧವಾದ ಆಧ್ಯಾತ್ಮಿಕತೆಯ ಊರುಗೋಲಿನೊಂದಿಗೆ ಮನುಷ್ಯನು ಮುನ್ನಡೆದಿದ್ದಾನೆ. ವಿಶ್ವದ ಸೃಷ್ಟಿ ನಿಯಮವಾದ ಆತ್ಮವನ್ನು ಸಾಧಿಸಲು ಈ ಸಂಕೀರ್ಣ ವಿಶ್ವದಲ್ಲಿ ಹಂಬಲಿಸುತ್ತಿದ್ದಾನೆ. ಬೃಹದಾರಣ್ಯಕ ಉಪನಿಷತ್ತಿನ "ಪ್ರಾರಂಭದಲ್ಲಿ ಎಲ್ಲವೂ ಒಂಟಿ; ಈ ಪ್ರಪಂಚವು ಆತ್ಮಮಾತ್ರವಾಗಿತ್ತು... ಅದು ಎರಡನೆಯದನ್ನು ಬಯಸಿತು. ಹೀಗಾಗಿ ಸೃಷ್ಟಿಯು ಹುಟ್ಟಿತು." ಹಾಗಾಗಿಯೂ ಆತ್ಮ, ಅಂತರಾತ್ಮ ಬಾಹ್ಯಾತ್ಮ, ನಿರಾತ್ಮ ಮತ್ತು ಪರಮಾತ್ಮಗಳ ವಿಶಿಷ್ಟ ಸ್ಥಿತಿಗಳ ನೋಟದ ನಡುವೆಯೂ ಈ ಆತ್ಮನ ಪ್ರಕೃತಿ ಬೇರೇನೂ ಆಗಿರದೆ ಅಧಿಷ್ಠಾತೃವೇ (ಪರಮ ಅಗ್ರಾಸನಾಧಿಕಾರಿ) ಆಗಿದೆ.

ವಿಷ್ಣುಪುರಾಣದಲ್ಲಿ ಆತ್ಮದ ಐದು ಬಗೆಯರೂಪಗಳನ್ನು ವರ್ಣಿಸಲಾಗಿದೆ. ಅವು ವಿಷ್ಣುವು ಒಬ್ಬನೇ ಆಗಿದ್ದರೂ ಭೂತಾತ್ಮ, ಇಂದ್ರಿಯಾತ್ಮ, ಪ್ರಧಾನಾತ್ಮ (ಪ್ರಕೃತಿ), ಆತ್ಮ ಮತ್ತು ಪರಮಾತ್ಮ. ಹೀಗೆಲ್ಲಾ ಪರಮಾತ್ಮನನ್ನು ಕಾಣಲು ಮನುಷ್ಯ ಚಿಂತನೆಯು ತುಡಿದಿದೆ. ಪರಮ ಆನಂದದ ಪ್ರಾಪ್ತಿ ಹಾಗೂ ಪೋಷಣೆಗಾಗಿ ನಮ್ಮ ಪರಂಪರೆಯಲ್ಲಿ ವಿಶ್ವಾತೀತವಾದ (cosmic) ಹಲವು ಶಕ್ತಿಗಳು ಪ್ರಕಟಗೊಂಡಿವೆ. ಆ ಮಹಾಶಕ್ತಿಗಳಲ್ಲಿ ವಿಷ್ಣು, ಶಿವ, ಶಿವೆ, ಅಗ್ನಿ ಮೊದಲಾದ ದೇವ ದೇವಿಯರ ರೂಪಗಳನ್ನು ಗಮನಿಸಬಹುದು; ಸಪ್ತ ಮಾತೃಕೆಯರೂ ಇಲ್ಲಿ ನೆನಪಾಗುತ್ತಾರೆ. 'ಪುರುಷಸೂಕ್ತ'ದಲ್ಲಿ ಡಿ.ವಿ.ಜಿ.ಯವರು' ಮನುಷ್ಯನ ಬಾಳು ಚೆನ್ನಾಗಿರಬೇಕಾದರೆ ಅವನ ನಡವಳಿಕೆಗೆ ಒಂದು ನೀತಿ, ನಿಷ್ಕರ್ಷೆ ಇರಬೇಕು. ಆ ನೀತಿಯು ಮೂರು ಅಂಶಗಳನ್ನು ಕುರಿತ ಸಿದ್ಧಾಂತದ ಮೇಲೆ ನಿಂತಿರಬೇಕಾಗಿದೆ. ಅವು (೧) "ನಾನು","ನಾನು" ಎಂದುಕೊಳ್ಳುವ ಜೀವ, (೨) ಆ ಜೀವದ ಅನುಭವದಲ್ಲಿರುವ ಪ್ರಪಂಚ (೩) ಜೀವ, ಪ್ರಪಂಚಗಳೆರಡಕ್ಕೂ ಮೂಲ

ಕಾರಣವಾಗಿಯೂ, ಸಂಯೋಗ ಸಾಧನವಾಗಿಯೂ, ನಿಯಾಮಕವಾಗಿಯೂ ಇರುವ ವಿಶೇಷ ವಸ್ತುವೋ ಶಕ್ತಿಯೋ ಒಂದು ಇರುವ ಪಕ್ಷದಲ್ಲಿ ಆ ಮೂರನೆಯ ಪರವಸ್ತು ಅಥವಾ ಈಶ್ವರ, ಈ ಮೂರರ ಸ್ವರೂಪಗಳೂ, ಅನ್ಯೋನ್ಯ ಸಂಬಂಧಗಳೂ ತಿಳಿದಲ್ಲದೆ ಮನುಷ್ಯನು ಬಾಳುವ ಬಗೆಯನ್ನು ಕಂಡುಕೊಳ್ಳಲಾಗದು. ಜೀವ, ಜಗತ್ತು ಮತ್ತು ಈಶ್ವರ ಈ ಮೂರರ ಒಟ್ಟಿನ ಅರಿವೇ ತತ್ತ್ವಜ್ಞಾನ ಎಂದಿದ್ದಾರೆ. ಅವರೇ 'ದೇವರು' ಬರಹದಲ್ಲಿ "ಜನರನ್ನು ನೀತಿಮಾರ್ಗದಲ್ಲಿ ಬೆಳೆಸಿ ತಂದಿರುವುದು ಭಗವಂತನ ಬಗೆಗೆ ಭಯ ಮತ್ತು ಪ್ರೀತಿ. ಆದ್ದರಿಂದ ದೇವರಿಲ್ಲದೆ ಮನುಷ್ಯ ಬದುಕಲಾರನೆನಿಸುತ್ತದೆ. ದೇವರ ಬೆಂಬಲ ಮನುಷ್ಯನಿಗೆ ಯಾವಾಗಲೂ ಬೇಕಾಗಿದೆ, ಎಂದಿದ್ದಾರೆ. ನಮ್ಮಲ್ಲಿ ಸಿದ್ಧತೆಯಿದ್ದಲ್ಲಿ ಸೃಷ್ಟಿಯ ಎಲ್ಲದರಲ್ಲಿಯೂ, ಎಲ್ಲೆಡೆಯಲ್ಲಿಯೂ ಪರಮ ಆನಂದವನ್ನು ನಾವು ಅನುಭವಿಸಬಹುದು. ಗುಪ್ತವಾಗಿರುವ ಪರಮಾನಂದವನ್ನು ಕ್ರೀಯಾಶೀಲತೆಯು ವ್ಯಕ್ತಗೊಳಿಸುತ್ತದೆ ಎಂದೂ ಪ್ರಾಜ್ಞರು ಹೇಳಿದ್ದಾರೆ.

ಶುಕ್ರನೀತಿಸಾರದಲ್ಲಿ 'ಶಿಲ್ಪ' ಎಂಬ ಪದವು ಮತ್ತೊಂದು ಜ್ಞಾತಿ ಪದವಾದ ಕಲಾ ಎಂಬುದರಿಂದ ಪಲ್ಲಟಗೊಂಡಿದೆ. ಶಿಲ್ಪವನ್ನು ವೃತ್ತಿಯಾಗಿ ಸ್ವೀಕರಿಸಿದ್ದು ವೇದೋತ್ತರ ಯುಗದ ಬಹುಮುಖ್ಯ ಬೆಳವಣಿಗೆ. ಶ್ರೀಲಂಕಾದ 'ಮಹಾವಾಸ್ತು' ವಿನಲ್ಲಿ ಕಲೆಗಳು ಎಂಬ ಅರ್ಥದಲ್ಲಿಯೇ ಶಿಲ್ಪಕ್ಕೆ ಸಂಬಂಧಿಸಿದ ಕೆಲಸವನ್ನೇ ಮಾಡುತ್ತಿದ್ದವರು ಉಲ್ಲೇಖಿಸಲ್ಪಟ್ಟಿದ್ದಾರೆ. ಈ ಪಟ್ಟಿಯಲ್ಲಿ ಚಿತ್ರಕಾರ, ಬಡಗಿ, ಶಿಲ್ಪಿ, ಕೆತ್ತನೆ ಮಾಡುವವ, ಅಲಂಕರಿಸುವವ, ವಾಸ್ತುಶಿಲ್ಪಿ, ಮೋಜಣಿಗಾರರೂ ಇದ್ದಾರೆ. ರಾಮಾಯಣದಲ್ಲಿಯೂ ಕುಶಲಕಲೆಗಾರರ ವರ್ಗದಲ್ಲಿ ಸ್ಥಪತಿ, ಬಡಗಿ, ಬಿದಿರಿನ ಕೆಲಸಗಾರರು ಮೊದಲಾದವರಿದ್ದಾರೆ. ಮಿಲಿಂದ ಪಣ್ಹದಲ್ಲಿ ನಗರಶಿಲ್ಪಿಯ ಲಕ್ಷಣಗಳಿವೆ. ಮಯಮತದ ಹೊತ್ತಿಗೆ ಕಲೆ ಮತ್ತು ವಾಸ್ತುಶಿಲ್ಪದಲ್ಲಿ ನಿರತರಾದ ಶಿಲ್ಪಿಗಳ ಯಾದಿಯು ಸಂಕ್ಷಿಪ್ತಗೊಂಡು ಸ್ಥಪತಿ, ಸೂತ್ರಗ್ರಾಹಿ, ವರ್ಧಕಿ, ಮತ್ತು ತಕ್ಷಕರಿಗೆ ಸೀಮಿತಗೊಂಡಿತು. ವಿಷ್ಣುಧರ್ಮೋತ್ತರದ ೩ನೆಯ ಅಧ್ಯಾಯ ಚಿತ್ರಸೂತ್ರದಲ್ಲಿ ಶಿಲ್ಪ – ಚಿತ್ರಗಳನ್ನು ಪರಸ್ಪರವೆಂಬಂತೆ ನೋಡಲಾಗಿದೆ; ದೊಡ್ಡ ವ್ಯತ್ಯಾಸ ಕಾಣುವುದಿಲ್ಲ. ಅನುಕರಣೆ ಅಥವಾ ನಕಲು ಮಾಡುವ ಪ್ರವೃತ್ತಿಯು ಆದಿಮ ಕಾಲವೇ ಅಲ್ಲದೆ ವೇದಕಾಲದಷ್ಟು ಪುರಾತನ! ಐತ್ತರೇಯ ಬ್ರಾಹ್ಮಣದಷ್ಟು ಹಿಂದೆಯೇ ಪ್ರಸ್ತಾಪಿತವಾಗಿದೆ ಎಂದೂ ಹೇಳಲಾಗಿದೆ. ಪ್ರಮಾಣವು ಪ್ರತಿಮಾಲಕ್ಷಣದೊಂದಿಗೆ ಮಹತ್ವದ ಪಾತ್ರ ನಿರ್ವಹಿಸುತ್ತದೆ. ಪ್ರಮಾಣವು ಅಳತೆಯ ಮಟ್ಟವೂ ಹೌದು, ಪ್ರತಿಮೆಯೊಂದಿಗಿನ ತಾದಾತ್ಮ್ಯದ ಸಾಧ್ಯತೆಯೂ ಹೌದು.

ಅಗ್ನಿಪುರಾಣದಲ್ಲಿ ಶಿಲ್ಪಿನ್ ಪದವನ್ನು ವಿಗ್ರಹಗಳನ್ನು ಮಾಡುವವನು ಎಂದಿದ್ದರೆ, ಶತಪಥ ಬ್ರಾಹ್ಮಣದಲ್ಲಿ ಶಿಲ್ಪವು ದಿವ್ಯದ ಅನುಕೃತಿ ಎಂಬ ಮಾತಿದೆ. ಐತ್ತರೇಯ ಬ್ರಾಹ್ಮಣದಲ್ಲಿ (ಸಾಯಣರ ವ್ಯಾಖ್ಯಾನ) ಶಿಲ್ಪವನ್ನು ಆಶ್ಚರ್ಯಕರ ಕರ್ಮ ಎಂದು ವಿವರಿಸುತ್ತಲೇ 'ದೇವ' ಮತ್ತು 'ಮಾನವ' ಎಂಬ ಎರಡು ವಿಧದ ಶಿಲ್ಪವನ್ನು ಉಲ್ಲೇಖಿಸಲಾಗಿದೆ. ಭೋಜದೇವನ ಸಮರಾಂಗಣ ಸೂತ್ರದಾರದಲ್ಲಿ (ಅಧ್ಯಾಯ ೭೧) ವಿಶ್ವದಲ್ಲಿಯೇ ಎಲ್ಲ ಕಲೆ ಮತ್ತು ಕರಕುಶಲಕಲೆಗಳಲ್ಲಿ ಬಹುಮುಖ್ಯವಾದುದು ಚಿತ್ರಕರ್ಮ ಎಂದು ಹೇಳಲಾಗಿದೆ.

ರೇಖಣೆ, ರೇಖಾಚಿತ್ರರೂಪಣದ ಬಗ್ಗೆಯೂ ಹೇಳಲಾಗಿದೆ.

ಅಧ್ಯಾಯ ೭೬ರಲ್ಲಿ ಪ್ರತಿಮಾವಿಗ್ರಹಗಳ ವಿವರಗಳ ಜತೆ ಜತೆಗೇ ವಿಗ್ರಹ ಸೃಷ್ಟಿಯ ವಿವಿಧ ಮಾಧ್ಯಮಗಳ (ಮರ, ಶಿಲೆ, ತಾಮ್ರ, ಬೆಳ್ಳಿ ಮತ್ತು ಬಂಗಾರಗಳು) ಬಗ್ಗೆಯೂ ವಿವರಿಸಲಾಗಿದೆ.

ನಮ್ಮ ಕರಕುಶಲಿಗಳು ತಾತ್ವಿಕ ತಿಳುವಳಿಕೆ ಹೊಂದಿಲ್ಲದೆ ಸೃಷ್ಟಿಸಿದರೆ ಹಲವು ಲೋಪಗಳ ಕೃತಿಗಳು ಸೃಷ್ಟಿಯಾಗುತ್ತವೆ. ಹಾಗಾಗಿ ಪಥ್ಯ (ಶಾಸ್ತ್ರ) ಅಥವಾ ತತ್ವಗಳಲ್ಲಿ ಪರಿಣಿತ\ಪಂಡಿತರಾದವರ ಅಭಿಪ್ರಾಯಗಳನ್ನು ಪ್ರಮಾಣವಾದುವೆಂದು ಒಪ್ಪಿಕೊಳ್ಳಲು ಅರ್ಹ ಎಂದು ಸಮರಾಂಗಣ ಸೂತ್ರದಾರದ ೭೮ನೆಯ ಅಧ್ಯಾಯದಲ್ಲಿ ಹೇಳಲಾಗಿದೆ.

ಪ್ರತಿಮಾ ಸೃಷ್ಟಿಯ ಪರಂಪರೆಯು ಕುಶಲಕಲೆಗಾರರ ಕುಟುಂಬಗಳ ಇಡೀ ಬದುಕಿನ ದೃಶ್ಯಕಲಾಧ್ಯಾನದಂತೆ ನಡೆದು ಬಂದಿದೆ. ದೇವತಾ ಶಿಲ್ಪವನ್ನು ರೇಖಿಸುವ, ಚಿತ್ರಿಸುವ ಅಥವಾ ಅದರ ರೂಪವನ್ನು ಅಂತರಂಗದ ಕಲ್ಪನೆಯಲ್ಲಿ ದೃಶ್ಯೀಕರಿಸುವಿಕೆಯ ಎರಡೂ ಸೃಷ್ಟಿಶೀಲ ಪ್ರಕ್ರಿಯೆಗಳು ಒಂದೇ ಆಗಿರುತ್ತವೆ. ಇಂತಹ ಸೃಷ್ಟಿಗಳಿಗೆ ದೈವೀಕ ದೃಷ್ಟಿಕೋನವೇ ಅಲ್ಲದೆ ಕರಕುಶಲತೆಯ ಲೌಕಿಕದ ಕಾಳಜಿಗಳೂ ಇವೆ. ಅಗ್ನಿ, ವಾಯು, ಮತ್ಸ್ಯ ಪುರಾಣಗಳಲ್ಲಿ ಪ್ರತಿಮಾ ಲಕ್ಷಣದ ವಿವರಗಳು ಇವೆ. ನಗ್ನಜಿತನ ಚಿತ್ರಲಕ್ಷಣ, ಮಾರ್ಕಂಡೇಯ ಮತ್ತು ವಜ್ರರ ಸಂವಾದ 'ಚಿತ್ರಸೂತ್ರ', ಸಮರಾಂಗಣ

ಸೂತ್ರಧಾರ, ಅಪರಾಜಿತ ಪೃಚ್ಚಾ, ಮಾನಸೋಲ್ಲಾಸ, ಶಿಲ್ಪರತ್ನ, ಶಿವತತ್ವರತ್ನಾಕರ, ಶ್ರೀ ಬ್ರಾಹ್ಮೀಯ ಚಿತ್ರಕರ್ಮ ಶಾಸ್ತ್ರ, ಇತ್ಯಾದಿಗಳಲ್ಲಿ ಶಿಲ್ಪಸೃಷ್ಟಿಗೆ ಪೂರಕ, ಮೂಲವಾದ ತಾಲಮಾನಗಳ ನಿಷ್ಕೃಷ್ಟವಿವರಗಳಿವೆ; ಇಂದಿಗೂ ನಮ್ಮ ಸಮಕಾಲೀನ ಮತ್ತು ಸಂಪ್ರದಾಯ ಶಿಲ್ಪಿಗಳಿಗೆ ಉಪಯುಕ್ತವಾಗಿವೆ.[೬]

❑

---

**ಟಿಪ್ಪಣಿಗಳು**

೧. ವೇದಕಾಲದಲ್ಲಿ ಮೂರ್ತಿ ಪೂಜೆ ಇದ್ದಿತೆಂದು ತೋರುತ್ತದೆ. ನಂತರದಲ್ಲಿ ಸವಿತೃವನ್ನು (ಸವಿತೃವೆಂದರೆ ಆಕಾಶದಲ್ಲಿ ನಾವು ನೋಡುವ ಭೌತಿಕ ಸೂರ್ಯನು ಅಲ್ಲ. ಅತ್ಯುನ್ನತ ಅಂತರಿಕ್ಷದಲ್ಲಿ ಹಾಗೂ ಅದರ ಕೆಳಗಿನ ಮೂರುಲೋಕಗಳಿಗೂ ಅತೀತನಾದ ಪರಮ ತೇಜಸ್ಸು.) ಒಂದು ಮುಖದ ದೇವತೆಯಾಗಿ, ದಿವ್ಯಶಕ್ತಿಗಳ ಸಂಕೇತವಾದಂತಹ ನೀರಿನ ಮೇಲೆ ನಿಂತಿರುವಂತೆಯೇ ಅಥವಾ ತಾವರೆಯ ಮೇಲೆ ಕುಳಿತ ಷಣ್ಮುಖಿಯಾಗಿಯೋ, ಸಂಕೇತಿಸಲಾಯಿತು. ಆಕೆಯ ಒಂದು ಜೊತೆ ಕೈಗಳಲ್ಲಿ ಶಂಖ ಮತ್ತು ಚಕ್ರಗಳು, ಎರಡನೆಯ ಕೈಗಳ ಜೋಡಿಯು ಗದೆ ಮತ್ತು ಪರಶುವನ್ನು ಹಿಡಿದು ದೈತ್ಯರೊಂದಿಗೆ ಸೆಣಸುವ ಆಕೆಯ ಶಕ್ತಿಯನ್ನು ಸಂಕೇತಿಸುತ್ತವೆ. ಮತ್ತೊಂದು ಜೋಡಿ ಕೈಗಳಲ್ಲಿ ದೇವಿಯು ಮಧು ಪಾತ್ರೆಯನ್ನು ಹಿಡಿದಿದ್ದು ಇನ್ನೊಂದು ಜೋಡಿ ಕೈಗಳು ಆಕೆಯ ಆಶೀರ್ವಾದವನ್ನು ಬಿಂಬಿಸುತ್ತವೆ. ಋಗ್ವೇದದ ಸಂದರ್ಭದಲ್ಲಿ ಪ್ರತಿಮಾ ಆರಾಧನೆ ಇದ್ದಿತೆಂದು ಹೇಳಲಾಗಿದೆ. ಐತ್ತರೇಯ ಬ್ರಾಹ್ಮಣದಲ್ಲಿ "ಶಿಲ್ಪಾ ನಿಶಂಸತಿ ದೇವ ಶಿಲ್ಪಾನ್ಯೇತೇಷಾಂ ವೈಶಿಲ್ಪಾನಾಮನುಕೃತೀಹ ಮಧಿಗಮ್ಯತೇ ಹಸ್ತೀಕಂಸೋ ವಾಸೋ ಹಿರಣ್ಯ ಮಶ್ವತರೀ ರಥಃ ಶಿಲ್ಪ" ಎಂಬ ಮಾತುಗಳೂ ಇವೆ.

೨. ಆ ನೋಭದ್ರಾಃ ಕ್ರತವೋಯಂತು ವಿಶ್ವತೋ ಅದಬ್ಧಾಸೋ ಅಪರೀತಾಸ ಉಧ್ಭಿದಃ ದೇವಾನೋ ಯಥಾ ಸದಯಿದ್ ವೃಧೇ ಅಸನ್ ಅಪ್ರಾಯುವೋ ರಕ್ಷಿತಾರೋ ದಿವೇದಿವೇ.

*–ಋಗ್ವೇದ (೧.೮೯.೧)*

೩. ನಂದಾಮ ಶರದಶ್ಯತಂ, ಮೋಧಾಮ ಶರದಶ್ಯತಂ
ಭವಾಮಶರದಶ್ಯತಂ, ಶೃಣವಾಮ ಶರದಶ್ಯತಂ.
ಪ್ರಬ್ರವಾಮ ಶರದಶ್ಯತಂ, ಜೀತಾಸ್ಯಾಮ ಶರದಶ್ಯತಂ,
ಜ್ಯೋಕ್ ಚ ಸೂರ್ಯಂದೃಶೇ ॥

*–ತೈತ್ತಿರೀಯ ಆರಣ್ಯಕ (೪.೪೨.೩೨).*

೪. ಋಗ್ವೇದದಲ್ಲಿ ಜ್ಯೋತಿಯು ಅಮರ ಸಾರವಾಗಿ ಒಂದು ಒಳಬೆಳಕಿನ ಪರಿಕಲ್ಪನೆಯಾಗಿ ಪ್ರಾತಿ ನಿಧ್ಯಗೊಂಡಿದೆ; ಅದನ್ನು ದೇವ ಅಥವಾ ಮಾನವನಿಗೆ ಆರೋಪಿಸಿ ಆಲೋಚಿಸಲಾಗಿದೆ. ಈ ದೇವ ಸುದೀರ್ಘಸ್ಥಾಪಿತ, ಅಮರ, ... ಎಲ್ಲ ದೇವರುಗಳೂ ಅದೇ ಆಲೋಚನೆ ಮತ್ತು ಉದ್ದೇಶಗಳೊಂದಿಗೆ, ನೇರ (ಅವನಲ್ಲಿಗೆ) ಹೋಗುವವರು ಅಸಮಾನ ಮಾನವ ಶಕ್ತಿಗಳ ಸಂಗಮ ಬಿಂದು ...." (ಎಲ್ ರೆನೌರವರ ಇಂಗ್ಲೀಷ್ ಭಾಷಾಂತರ ಆಧರಿಸಿದ ಬೆ.ಗೋ ರಮೇಶ್‌ರವರ ಕನ್ನಡ ಅನುವಾದದಿಂದ ಗ್ರಹಿಸಲಾಗಿದೆ)
ನೋಡಿ : ಕಲಾತತ್ವಕೋಶ, ಸಂಪುಟ : ೩
ಪುಟ ೨೫೪, ಪ್ರಸಾರಾಂಗ, ತುಮಕೂರು ವಿಶ್ವವಿದ್ಯಾನಿಲಯ, ೨೦೧೩)

೫. ಶ್ರೀದುರ್ಗಾ ಸಪ್ತಶತೀಯ ಎಂಟನೆಯ ಅಧ್ಯಾಯ ರಕ್ತಬೀಜವಧೆಯಲ್ಲಿ ದೇವಶತೃಗಳ ಅಳಿವಿಗಾಗಿ, ದೇವಶ್ರೇಷ್ಠರ ಉಳಿವಿಗಾಗಿಯೂ ಬ್ರಹ್ಮ, ಈಶ್ವರ, ಸ್ಕಂದ, ವಿಷ್ಣು, ಇಂದ್ರರ ಅತ್ಯಂತ ಶಕ್ತಿಯುತವಾದ ಸತ್ವಗಳು ಅವರವರ ದೇಹದಿಂದ ಹೊರಬಂದು ಆಯಾ ರೂಪದಿಂದಲೇ ಚಂಡಿಕೆಯನ್ನು ಸೇರಿದವು. ಯಾವ ದೇವತೆಗೆ ಯಾವ ರೂಪವಿದ್ದಿತೋ, ಯಾವ ಭೂಷಣ – ವಾಹನಗಳಿದ್ದವೋ ಅವುಗಳ ಆಕಾರವನ್ನೇ ಹೊಂದಿ ಆಯಾ ಶಕ್ತಿಯು ಅಸುರರೊಡನೆ ಯುದ್ಧ ಮಾಡಲು ಬಂದಿತು.

ಬ್ರಹ್ಮನ ಶಕ್ತಿಯು ಹಂಸದಿಂದ ಕೂಡಿದ ವಿಮಾನದಲ್ಲಿ ಕುಳಿತು ಜಪಮಾಲಿಕೆ, ಕಮಂಡಲಗಳನ್ನುಳ್ಳವಳಾಗಿ ಬಂದಳು: ಅವಳನ್ನೇ ಬ್ರಹ್ಮಾಣಿಯೆಂದು ಹೇಳಲಾಗಿದೆ. ಮಾಹೇಶ್ವರಿಯು ವೃಷಭವಾಹನಳಾಗಿ ಶ್ರೇಷ್ಠವಾದ ತ್ರಿಶೂಲವನ್ನು ಧರಿಸಿ, ದೊಡ್ಡ ಸರ್ಪಗಳನ್ನು ಆಭರಣಗಳನ್ನಾಗಿಸಿಕೊಂಡು, ಚಂದ್ರಕಲೆಯನ್ನೇ ಶಿರೋಭೂಷಣವಾಗಿಸಿಕೊಂಡು ಶೋಭಿಸುವವಳು. ಕುಮಾರ ಸ್ವಾಮಿಯ ರೂಪವನ್ನುಳ್ಳವಳು ಕೌಮಾರಿ. ಹಾಗಾಗಿ ಶ್ರೇಷ್ಠವಾದ ನವಿಲನ್ನು ವಾಹನವಾಗಿ ಹೊಂದಿ ಶಕ್ತ್ಯಾಯುಧವನ್ನು ಕರದಲ್ಲಿ ಧರಿಸಿದ್ದಾಳೆ. ವೈಷ್ಣವಿಯು ವಿಷ್ಣುವಿನ ಸತ್ವದಿಂದ ಗರುಡನ ಮೇಲೆ ಕುಳಿತು ಶಂಖ ಚಕ್ರಗದೆ ಶಾರ್ಙ್ಗ (ಧನುಸ್ಸು) ಖಡ್ಗಗಳನ್ನು ಧರಿಸಿದ್ದಾಳೆ. ಯಜ್ಞವರಾಹ



ರೂಪವನ್ನು ಪಡೆದ, ಶ್ರೀಹರಿಯ ಶಕ್ತಿಯ ವಾರಾಹಿಯು ಮಹಾಚಕ್ರವನ್ನು ಹಿಡಿದು ಕೋರೆದಾಡೆಗಳಿಂದ ನೀರಿನಲ್ಲಿ ಮುಳುಗಿದ್ದ ಭೂಮಿಯನ್ನು ಮೇಲಕ್ಕೆತ್ತಿದ ಮಂಗಳ ಸ್ವರೂಪಳಾಗಿದ್ದಾಳೆ. ನರಸಿಂಹನ ಶರೀರಕ್ಕೆ ಸದೃಶವಾದ ಶರೀರವನ್ನು ಧರಿಸಿದ ನಾರಸಿಂಹಿಯು ತ್ರಿಲೋಕ ಸಂರಕ್ಷಣೆಯಲ್ಲಿ ನಿರತಳಾಗಿದ್ದಾಳೆ.

ಇಂದ್ರನ ಪ್ರತಿರೂಪಳಾದ ಇಂದ್ರಾಣಿಯು ಸಹಸ್ರನಯನಗಳಿಂದ ಪ್ರಜ್ವಲಿಸುತ್ತ ಮಹಾವಜ್ರಾಯುಧವನ್ನು ಧರಿಸಿದ್ದಾಳೆ. ದೇವಿಯ ಶರೀರದಿಂದ ಹೊರಬಂದ ಚಂಡಿಕೆಯು ಅತ್ಯುಗ್ರಳೂ, ಅತಿಭಯಂಕರಳೂ, ನೂರಾರು ನರಿಗಳ ನಾದದಿಂದ ಕೂಡಿದವಳೂ ಆಗಿದ್ದಾಳೆ.

೬. ಸಂಕ್ಷಿಪ್ತ ವಿವರಗಳಿಗೆ ಗಮನಿಸಿ :

ಲಲಿತ ಕಲೆಗಳು : ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆ :

ಸಂಪುಟ : ೧೬

ಸಂ : ಕೆ.ವಿ. ಸುಬ್ರಹ್ಮಣ್ಯಂ, ೨೦೧೫

ಕನ್ನಡ ಸಾಹಿತ್ಯ ಪರಿಷತ್ತು

ಪಂಪಮಹಾಕವಿರಸ್ತೆ

ಚಾಮರಾಜ ಪೇಟೆ

ಬೆಂಗಳೂರು-೫೬೦ ೦೧೮



# ೨. ಶ್ರೀ ವಿನಾಯಕಾಯ ನಮಃ

ಏಕದಂತಂ ಚತುರ್ಹಸ್ತಂ ಪಾಶಮಂಕುಶಧಾರಿಣಮ್ ।
ರದಂಚ ವರದಂ ಹಸ್ತೈರ್ಬಿಭ್ರಾಣ ಮೂಷಕ ಧ್ವಜಮ್ ॥
ರಕ್ತಂ ಲಂಬೋದರಂ ಶೂರ್ಪಕರ್ಣಕಂ ರಕ್ತವಾಸಸಮ್ ।
ರಕ್ತ ಗಂಧಾನುಲಿಪ್ತಾಂಗಂ ರಕ್ತ ಪುಷ್ಪೈಃ ಸುಪೂಜಿತಮ್ ॥

ವಿಶ್ವದ ಯಾವ ಮೂಲತತ್ವದಿಂದ ಎಲ್ಲಾ ತತ್ವಗಳೂ ರೂಪು ಗೊಳ್ಳುತ್ತವೆಯೋ ಆ ಮೂಲವೇ ಗಣಪತಿ. ವಿಶ್ವಕ್ಕೆ ಮೂಲ ಕಾರಣನಾದ ಗಣಪತಿ 'ತತ್ವಮಸಿ' ವಾಕ್ಯದ ವಿಗ್ರಹ ರೂಪವೇ ಗಣಪತಿ. ಛಾಂದೋಗ್ಯ ಉಪನಿಷತ್ತಿನ ಈ ಮಾತು ಬಹುಷಃ ತತ್ವಜ್ಞಾನದ ಚರಿತ್ರೆಯಲ್ಲಿಯೇ ದಿಟ್ಟತೆಯನ್ನು ಅರಗಿಸಿಕೊಂಡ ಮಾತಾಗಿದೆ. ಗಜಮುಖವೇ ವಿಶ್ವ, ಮಾನವ ರೂಪವೇ ವ್ಯಕ್ತಿ. ಅವೆರಡೂ ಒಂದೇ ಎಂಬುದನ್ನು ಗಜಮುಖ ಮತ್ತು ಮಾನವ ಶರೀರವು ಸೇರಿ ವಿಗ್ರಹವಾಗಿರುವಿಕೆಯು ತೋರುತ್ತದೆ. ಇಂತಹ ಗಣಪತಿಯು ಎಲ್ಲ ಕಲೆ ಮತ್ತು ಜ್ಞಾನಗಳಿಗೆ ನೆಲೆಯೇ ಆಗಿದ್ದಾನೆ.

ದೇವಾಲಯದ ಆವರಣದ ದೇವತೆಗಳಲ್ಲಿ ಮೊದಲ ಆವರಣದಲ್ಲಿ ಗಣಪತಿಯು ಉಪೇಂದ್ರ, ಚಂದ್ರ, ಕಾಮ, ಷಣ್ಮುಖ, ಕುಬೇರ, ರುದ್ರ, ವಿಶ್ವಕರ್ಮ, ಬ್ರಹ್ಮ ದೇವತೆಗಳ ಮೂರ್ತಿಗಳಂತೆ ಪ್ರತ್ಯೇಕ ಆಲಯವನ್ನು ಹೊಂದಿ, ಪ್ರತ್ಯೇಕ ಪೂಜೆಗೆ ಪಾತ್ರನಾಗಿದ್ದಾನೆ. ಬಹುತೇಕ ವೈಷ್ಣವ ದೇವಾಲಯಗಳಲ್ಲಿ ಗಣಪತಿಯು ಮುಖ್ಯವಾಗಿ ಕಾಣಿಸಿಕೊಂಡಿದ್ದಾನೆ. ಪದ್ಮಸಂಹಿತೆ, ವಿಷ್ವಕ್ಸೇನ ಸಂಹಿತೆಗಳಲ್ಲಿ ಚತುರ್ಬಾಹು ಗಣಪತಿಯ ವರ್ಣನೆಯೇ ಅಲ್ಲದೆ ವೈಷ್ಣವ ಶಕ್ತಿಯ ವಿಘ್ನೇಶನ ಲಕ್ಷಣಗಳೂ ವಿವರಿಸಲ್ಪಟ್ಟಿವೆ. ನಾಲ್ಕು ಭುಜಗಳ ಗಣಪತಿಯ ಮೂರ್ತಿಯು ಎರಡು ಅಥವಾ ಮೂರು ಕಣ್ಣುಗಳು ಇರುವಂತೆ ರೂಪಿಸಬೇಕು. ನಾಗಯಜ್ಞೋಪವೀತವನ್ನು ತೊಟ್ಟಿರುವ ಗಣಪತಿಯ ರೂಪವು ಮೇಲಿನ ಬಲಹಸ್ತದಲ್ಲಿ ಚಕ್ರವನ್ನು, ಎಡ ಹಸ್ತದಲ್ಲಿ ಶಂಖವನ್ನು ಧರಿಸಿರುತ್ತಾನೆ. ಕೆಳಗಿನ ಬಲಹಸ್ತದಲ್ಲಿ ಅಂಕುಶವನ್ನು, ಎಡಹಸ್ತದಲ್ಲಿ ಪಾಶ ಅಥವಾ ವರದ ಮುದ್ರೆಯನ್ನು ಧರಿಸಿರುತ್ತಾನೆ. ಯಜ್ಞ ಸಂದರ್ಭಗಳಲ್ಲಿ ವಿಘ್ನಕಾರಕ ದುಷ್ಟಶಕ್ತಿಗಳ ದಮನಕ್ಕಾಗಿ ಈ ಮೂರ್ತಿಯನ್ನು ರೂಪಿಸಬೇಕು. ಹಾಗೆಯೇ ಇನ್ನೆರಡು ರೀತಿಗಳಲ್ಲಿಯೂ ಗಣಪತಿಯನ್ನು ರೂಪಿಸಬಹುದು.

೧. ಮೇಲಿನ ಬಲಪಾರ್ಶ್ವದ ಹಸ್ತದಲ್ಲಿ ಚಕ್ರವನ್ನು, ಎಡಪಾರ್ಶ್ವದ ಹಸ್ತದಲ್ಲಿ ಶಂಖವನ್ನೂ, ಎಡ ಪಾರ್ಶ್ವದ ಕೆಳಹಸ್ತದಲ್ಲಿ ಕೋಲು ಅಥವಾ ಬಡಗಿಯನ್ನು ಅಥವಾ ಗದೆಯನ್ನು ಹಿಡಿದಿರುವಂತೆ ಮೂರ್ತಿಸಬಹುದು.

೨. ಬಲಪಾರ್ಶ್ವದಲ್ಲಿ ಮೇಲಿನ ಹಸ್ತದಲ್ಲಿ ಪರಶುವನ್ನು ಕೆಳಹಸ್ತದಲ್ಲಿ ಅಂಕುಶವನ್ನು, ಎಡ ಪಾರ್ಶ್ವದಲ್ಲಿ ಮೇಲಿನ ಹಸ್ತದಲ್ಲಿ ಅಕ್ಷಮಾಲೆಯನ್ನು ಕೆಳಹಸ್ತದಲ್ಲಿ ಪಾಶವನ್ನು ಧರಿಸಿರುವಂತೆ ಮೂರ್ತಿಸಬಹುದು. ಗಣಪತಿಯ ಸೊಂಡಿಲ ತುದಿಯಲ್ಲಿ ಫಲವನ್ನು ಹಿಡಿದಿರುವಂತೆ ರೂಪಿಸಬಹುದು. ಇವುಗಳಲ್ಲಿ ಸೂಕ್ತ ರೂಪ ಲಕ್ಷಣಗಳ ಮೂರ್ತಿಯನ್ನು ಆರಾಧಕರು ಆಯ್ಕೆ ಮಾಡಿಕೊಳ್ಳಬಹುದು. ವಿಘ್ನೇಶ್ವರ ಮೂರ್ತಿಯನ್ನು ಒಂದೇ ಆಗಿ ಅಥವಾ ಇತರ ಮೂರ್ತಿಗಳೊಂದಿಗೆ ಪ್ರತಿಷ್ಠಾಪಿಸಿ ಪೂಜಿಸಬಹುದು. ಈ ದೇವತೆಯ ವಾಹನವು ಇಲಿ. ಗಣಪತಿ ದೇವಾಲಯದ ಮುಂದೆ ಗರುಡನು ಭಕ್ತ ಮುದ್ರೆಯಲ್ಲಿರುತ್ತಾನೆ ಎಂದು ವಿಷ್ವಕ್ಸೇನ ಸಂಹಿತೆಯಲ್ಲಿ ಹೇಳಲಾಗಿದೆ.

ಶ್ರೀ ತತ್ತ್ವನಿಧಿಯ ಮೂರನೇಯ ಸಂಪುಟ ಶಿವನಿಧಿಯಲ್ಲಿ ಮುದ್ಗಲ ಪುರಾಣದಲ್ಲಿರುವಂತೆ ಮೂವತ್ತೆರಡು ಗಣಪತಿಗಳ ಧ್ಯಾನ ವಿವರಗಳಿವೆ. ಮೊದಲಿಗೆ ಬಾಳೆಯ ಹಣ್ಣು, ಮಾವಿನಹಣ್ಣು, ಹಲಸಿನ ಹಣ್ಣು, ಕಬ್ಬು ಮತ್ತು

ಮೋದಕಗಳನ್ನು ಕೈಗಳಲ್ಲಿ ಹಿಡಿದಿರುವ ಬಾಲ ಸೂರ್ಯನಂತೆ ಹೊಳೆಯುತ್ತಿರುವ ದೇವನಾದ ಬಾಲಗಣಪತಿಯ ಧ್ಯಾನದ ಜತೆಜತೆಗೇ ತರುಣ ಗಣಪತಿ, ಭಕ್ತ ಗಣಪತಿ, ವೀರ ಗಣಪತಿ, ಶಕ್ತಿ ಗಣಪತಿ, ದ್ವಿಜ ಗಣಪತಿ, ಸಿದ್ಧಗಣಪತಿ, ಉಚ್ಛಿಷ್ಟ ಗಣಪತಿ, ವಿಘ್ನ ಗಣಪತಿ, ಕ್ಷಿಪ್ರ ಗಣಪತಿ, ಹೇರಂಬ ಗಣಪತಿ, ಲಕ್ಷ್ಮೀ ಗಣಪತಿ, ಮಹಾ ಗಣಪತಿ, ವಿಜಯ ಗಣಪತಿ, ನೃತ್ತ ಗಣಪತಿ, ಊರ್ಧ್ವ ಗಣಪತಿ, ಏಕಾಕ್ಷರ ಗಣಪತಿ, ವರ ಗಣಪತಿ, ತ್ರ್ಯಕ್ಷ ಗಣಪತಿ, ಕ್ಷಿಪ್ರ ಪ್ರಸಾದ ಗಣಪತಿ, ಹರಿದ್ರಾ ಗಣಪತಿ, ಏಕದಂತ ಗಣಪತಿ, ಸೃಷ್ಟಿ ಗಣಪತಿ, ಉದ್ದಂಡ ಗಣಪತಿ, ಋಣ ಮೋಚನ ಗಣಪತಿ, ಧುಂಡಿ ಗಣಪತಿ, ದ್ವಿಮುಖ ಗಣಪತಿ, ತ್ರಿಮುಖ ಗಣಪತಿ, ಸಿಂಹ ಗಣಪತಿ, ಯೋಗ ಗಣಪತಿ, ದುರ್ಗಾ ಗಣಪತಿ, ಸಂಕಟಹರ ಗಣಪತಿಗಳ ಧ್ಯಾನ ಪಥ್ಯ ವಿವರಗಳಿವೆ.

ಹರಿದಾಸರಲ್ಲಿ ವಾದಿರಾಜರು **"ಗಜಮುಖ ವಂದಿಸುವೆ ಕರುಣಿಸಿ ಕಾಯೋ ॥ ಗಜಮುಖ॥"** ಎಂದು ಹಾಡಿದ್ದರೆ, ವ್ಯಾಸ ತೀರ್ಥರು **"ಗಜಮುಖನೇ ಸಿದ್ಧಿದಾಯಕನೇ ವಂದಿಪೆ ಶರಣು"** ಎಂದಿದ್ದಾರೆ. **"ನಮ್ಮಮ್ಮ ಶಾರದೆ ಉಮಾಮಹೇಶ್ವರಿ ನಿಮ್ಮೊಳಗಿಹನಾರಮ್ಮ । ಕಮ್ಮ ಗೋಲನ ವೈರಿ ಸುತನಾದ ಸೊಂಡಿಲ । ಹೆಮ್ಮೆಯ ಗಣನಾಥನೇ ॥"** ಎಂದು ಕನಕದಾಸರು, **"ವಂದಿಸುವುದಾಗಲಿ ಗಣನಾಥನ"** ಎಂದು ಪುರಂದರದಾಸರು, **"ಗಜವದನ ಪಾಲಿಸೋ'** ಎಂದು ವಿಜಯದಾಸರು, **"ಲಂಬೋದರ ರಕ್ತಾಂಬರಧರ ಅಂಬರಾದೀಶ್ವರ ಗೌರಿಕುಮಾರ । ಲಂಬೋದರ ॥"** ಎಂದು ಜಗನ್ನಾಥದಾಸರು ಹಾಡಿದ್ದಾರೆ.

❑



ಶಕ್ತಿ ಗಣಪತಿ ನೃತ್ತ ಗಣಪತಿ



ಹೇರಂಬ ಗಣಪತಿ



ಅಷ್ಟ ನಾಯಿಕೆಯರೊಂದಿಗೆ ಗಣಪತಿ



ಅಷ್ಟಭಾರ್ಯಾ ಗಣಪತಿ



ಧುಂಡಿ ಗಣಪತಿ



ದ್ವಿಮುಖ ಗಣಪತಿ



# ೩. ವಿಶ್ವಕ್ಸೇನ

ಹೇಗೆ ಗಣಗಳೆಲ್ಲರ ನಾಯಕನಂತೆ ಶೈವ ಆಲಯಗಳಲ್ಲಿ ಗಣಪತಿಯು ಇರುತ್ತಾನೆಯೋ ಹಾಗೇ ವಿಷ್ಣುವಿನ ದೇವಾಲಯಗಳಲ್ಲಿ ವಿಷ್ವಕ್ಸೇನ ಮೂರ್ತಿಯು ಇರುತ್ತದೆ. ಜ್ಞಾನದ ಅಧಿದೇವತೆ ವಿಷ್ವಕ್ಸೇನನನ್ನು ಪರಾಶರ ಸಂಹಿತೆಯು

**"ಶಂಖ ಚಕ್ರ ಗದಾಸರ್ವ ಜ್ಞಾನ ಮುದ್ರಾದಿಧಾರಣಮ್**
**ಕಿರೀಟಾರಿ ವಿಭೂಷಾಂಗ ಮೂಸೀನಂ ಪದ್ಮ ಪೀಠಿಕೇ ॥**
**ಪಾಸಾರ್ಯ ದಕ್ಷಿಣಂ ಪಾದಂ ವಾಮಪಾದಂ ಸುಕುಂಚಿತಮ್**
**ವಿಷ್ವಕ್ಸೇನ ಮಹಂ ವಂದೇ ಮುಕ್ತಿ ಸಾಧಕಮ್ ॥"**

ಎಂದು ವರ್ಣಿಸಿದೆ.

ಪದ್ಮ ಸಂಹಿತೆಯಲ್ಲಿ ವಿಶ್ವಕ್ಸೇನನನ್ನು **"ಲಂಬೋದರಂ ಚ ಮುಖ್ಯೇನ ಕರೇಣಾಭಯದಾಯಿನಮ್"** ॥ ಎಂದಿದ್ದರೂ ಇವನು ಗಜಮುಖನಲ್ಲ; ಗಜಮುಖನಾದ ವೈಷ್ಣವ ಗಣಪತಿಯೇ ಬೇರೆ.

❑



# ೪. ದುರ್ಗಾ

ದುರ್ಗಾ ದೇವಿಯೆಂದರೆ ಭಟ್ಟ ಭಾಸ್ಕರರ ಅನುವಾದದಂತೆ, 'ಸಾಧಿಸಲು ಕಷ್ಟಕರವಾದುದು', ಅಥವಾ 'ಉಪಾಸಕರ ಸರ್ವ ಸಂಕಷ್ಟಗಳನ್ನೂ ಪರಿಹರಿಸುವವಳು' ಎಂದು ಸಾಮಾನ್ಯವಾಗಿ ಅರ್ಥೈಸಲಾಗುತ್ತಿದೆ. ಅತ್ಯಂತ ಲೋಕಪ್ರಿಯ ಶಕ್ತಿ ದೇವತೆಯೇ ದುರ್ಗಾ. 'ದೇವೀಭಾಗವತ' ಎಂಬ ಪುರಾಣವು ದುರ್ಗಿಗಾಗಿಯೇ ರೂಪುಗೊಂಡಿದೆ. ಈ ಪಠ್ಯಕ್ಕೆ 'ಚಂಡೀ', 'ದುರ್ಗಾಸಪ್ತಶತೀ' ಎಂಬ ಹೆಸರುಗಳೂ ಇವೆ.[೧] ಮಾರ್ಕಂಡೇಯ ಪುರಾಣದ ಒಂದು ಭಾಗವಾದ 'ದೇವಿಭಾಗವತ' ಪುರಾಣದ ಪ್ರತಿಯೊಂದು ಶ್ಲೋಕವೂ 'ಮಂತ್ರ'ವೆನಿಸಿ ದೇವೀ ಉಪಾಸಕರ ಅಪಾರ ನಂಬಿಕೆಗೆ ಪಾತ್ರವಾಗಿದೆ. ದುರ್ಗಾ ಎಂದರೆ ಹತ್ತಿರ ಸುಳಿಯಲು, ಅರ್ಥಮಾಡಿಕೊಳ್ಳಲು ಕಷ್ಟ ಸಾಧ್ಯಳು ಎಂದು ಅರ್ಥೈಸಲಾಗಿದೆ. ಆದರೆ ತೇಜಃಪುಂಜದ, ಶಕ್ತಿ ಸಮೂಹದ ನಾರೀ ರೂಪಳಾದ ದುರ್ಗಾದೇವಿಯನ್ನು ಅರಿಯಲು ಸಾಮಾನ್ಯ ಮನಃಸ್ಥಿತಿಗೆ ಸಹಜವಾಗಿಯೇ ಕಷ್ಟವೆನಿಸಿದರೂ ಶುದ್ಧಭಕ್ತಿಗೆ, ಆರಾಧನೆಗೆ ಒಲಿಯುವ ಪ್ರೇಮದ ತಾಯಿ ಆ ದೇವಿ. ಆಗಮ, ಪುರಾಣಗಳಲ್ಲಿ[೨] ದುರ್ಗಾದೇವಿಯ ರೂಪ ಲಕ್ಷಣಗಳನ್ನು ವಿಸ್ತೃತವಾಗಿ ವಿವರಿಸಲಾಗಿದೆ. ಶೈಲಪುತ್ರಿ, ಕೂಷ್ಮಾಂಡಿ, ಕಾತ್ಯಾಯನಿ, ಕ್ಷೇಮಂಕರಿ, ಹರಸಿದ್ಧಿ, ವನದುರ್ಗಾ, ವಿಂಧ್ಯವಾಸಿನಿ, ಜಯದುರ್ಗಾ ಇತ್ಯಾದಿ. ಈ ರೂಪಗಳು ಮೂರ್ತಿಶಿಲ್ಪ ಸೃಷ್ಟಿಗೆ ವೈವಿಧ್ಯಮಯ ಸಾಧ್ಯತೆಗಳನ್ನು ಬಿಂಬಿಸುತ್ತವೆ. ದುರ್ಗಾದೇವಿಯ ಮೂರ್ತಿಗಳನ್ನು ನಾಲ್ಕು, ಎಂಟು, ಹತ್ತು, ಹದಿನೆಂಟು ಅಥವಾ ಇಪ್ಪತ್ತು ಕೈಗಳಿರುವಂತೆ ರೂಪಿಸುತ್ತಾರೆ. ಸಾಮಾನ್ಯವಾಗಿ ಕಣ್ಣುಗಳು ಮೂರು. ಕೇಶಾಲಂಕಾರವು ಮುಕುಟದಂತೆ ಕಾಣುತ್ತದೆ. ಝುಗಝುಗಿಸುವ ಕೆಂಪು ವಸ್ತ್ರದ ಉಡುಗೆ, ಮಿಂಚುವ ಆಭರಣಗಳ ತೊಡುಗೆ ಸಾಮಾನ್ಯ. ಸಾಮಾನ್ಯವಾಗಿ ದುರ್ಗೆಯ ಕೈಯಲ್ಲಿ ಶಂಖ, ಚಕ್ರ, ಶೂಲ, ಬಿಲ್ಲು, ಖಡ್ಗ, ಅಂಕುಶ, ಗುರಾಣಿ, ಜಪಮಾಲೆ, ಸುರಾಪಾತ್ರೆ, ಮತ್ತು ಗಂಟೆಗಳು ಚಿತ್ರಿಸಲ್ಪಟ್ಟಿರುತ್ತವೆ.

ದುರ್ಗಾ ಮೂರ್ತಿಗಳು ಕಮಲದ ಹೂವಿನ ಮೇಲೆ ನಿಂತಿರುವಂತೆಯೂ, ಕೋಣನ ಶಿರದ ಮೇಲೆ ನಿಂತಿರುವಂತೆಯೂ, ಅಥವಾ ಸಿಂಹದ ಮೇಲೆ ಕುಳಿತಿರುವಂತೆಯೂ ಚಿತ್ರಿಸಿರುತ್ತಾರೆ. ದೇವನಹಳ್ಳಿಯ ಚೆನ್ನಕೇಶವ ಆಚಾರ್ಯರು ಶಿಲ್ಪ ಸೃಷ್ಟಿಗೆ ಪೂರಕವಾಗುವಂತೆ ಸಾಂಕೇತಿಕವಾಗಿ ಸಂಹಾರ ದುರ್ಗಾಂಬಾ, ಸೌಮ್ಯ ದುರ್ಗಾಂಬಾ, ವಿಷ್ಣು ದುರ್ಗಾಂಬಾ, ಶಂಭು ದುರ್ಗಾಂಬಾ, ಶಿವ ದುರ್ಗಾಂಬಾ, ದಶಭುಜ ದುರ್ಗಾಂಬಾ ರೂಪಗಳನ್ನು ರೇಖೆಗಳಲ್ಲಿ ರೂಪಿಸಿದ್ದಾರೆ. ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರೀ ತತ್ವನಿಧಿಯ ಶಕ್ತಿ ನಿಧಿಯಲ್ಲಿ ರಾಜಮಾತಂಗಿಕಾ, ರಿಪುಮಾರಿಣಿಕಾ ದುರ್ಗಾ, ಶೈಲಪುತ್ರೀ, ಚಂಡಖಂಡಾ, ರಾತ್ರಿ ದುರ್ಗಾ, ಸಿದ್ಧಿದಾಯಿನಿ, ಯೋಗನಿದ್ರಾ, ಮಂತ್ರಿಣೀ, ಶ್ಯಾಮಲಾ ಹೀಗೆ ಹಲವಾರು ದುರ್ಗೆಯರ ಬಗ್ಗೆ ಹೇಳಲಾಗಿದೆ.

❑

**ಅಡಿ ಟಿಪ್ಪಣಿ:**

೧. ಶ್ರೀ ದುರ್ಗಾ ಸಪ್ತಶತೀ ಪಾರಾಯಣ ಕ್ರಮದಲ್ಲಿ ಪಾಠ ಕ್ರಮವು ಹೀಗಿರುತ್ತದೆ: ಕವಚ, ಅರ್ಗಲಾ, ಕೀಲಕ, ನವಾರ್ಣ ಮಂತ್ರ ಜಪ, ರಾತ್ರಿ ಸೂಕ್ತ, ಸಪ್ತಶತೀ, ಪುನಃ ನವಾರ್ಣ ಮಂತ್ರ ಜಪ, ದೇವೀ ಸೂಕ್ತ, ರಹಸ್ಯತ್ರಯ, ಶಾಪೋದ್ಧಾರ ಮಂತ್ರ ಜಪ ಮತ್ತು ಕ್ರಮಾ ಪ್ರಾರ್ಥನೆ. ಕವಚ ವಿಭಾಗ ಪಠ್ಯದಲ್ಲಿ ಬ್ರಹ್ಮನು ಮಾರ್ಕಡೇಯನಿಗೆ ದೇವೀ ಕವಚದ ಕುರಿತು "ಎಲೈ ಮಹಾಮುನಿಯೇ ಸರ್ವ ಜೀವಿಗಳಿಗೂ ಉಪಕಾರವನ್ನುಂಟು ಮಾಡುವ ಅತ್ಯಂತ ರಹಸ್ಯವೊಂದಿರುವುದು, ಅದೇ ಪುಣ್ಯಕರವಾದುದು; ದೇವೀ ಕವಚ. ಅದನ್ನು ಆಲಿಸು" ಎಂದು ನವದುರ್ಗೆಯರ ಬಗ್ಗೆ ಹೇಳುತ್ತಾನೆ. ಶೈಲಪುತ್ರಿ, ಬ್ರಹ್ಮಚಾರಿಣಿ, ಚಂದ್ರ ಘಂಟಾ, ಕೂಷ್ಮಾಂಡಾ, ಸ್ಕಂದ ಮಾತೆ, ಕಾತ್ಯಾಯನಿ, ಕಾಲರಾತ್ರಿ, ಮಹಾಗೌರಿ ಹಾಗೂ ಸಿದ್ಧಿರಾತ್ರಿ ಎಂಬುವವರೇ ನವದುರ್ಗೆಯರು. ಇವರ ಕವಚದಿಂದ ಆವೃತರಾದ ಜನರು ಮೂರು ಲೋಕಗಳಲ್ಲಿಯೂ ಪೂಜ್ಯರಾಗುತ್ತಾರೆ. ಈ ದೇವೀ ಕವಚವು ದೇವತೆಗಳಿಗೂ ದುರ್ಲಭವು ಎಂದು ಹೇಳಲಾಗಿದೆ.

೨. ಅಗ್ನಿ ಪುರಾಣದಲ್ಲಿ ಚಂಡೀದೇವಿ ಮೊದಲಾದ ಪ್ರತಿಮೆಗಳ ಲಕ್ಷಣಗಳಿವೆ. ರುದ್ರಚಂಡೀ, ಪ್ರಚಂಡೆ, ಚಂಡೋಗ್ರೆ, ಚಂಡನಾಯಿಕೆ, ಚಂಡೆ, ಚಂಡವತಿ, ಚಂಡರೂಪ, ಅತಿ ಚಂಡಿಯಿಕೆ ಮತ್ತು ಉಗ್ರಚಂಡೆಯರ ವಿವರಗಳಿವೆ. ಒಂಬತ್ತು ಬಗೆಯ ಚಿತ್ರಗಳ 'ನವಕಲಾತ್ಮಿಕೆ'ಯ ಪ್ರಸ್ತಾಪವೂ ಇದೆ.

ಪಂಚ ದುರ್ಗಾ ಲಕ್ಷಣ
ಓಂ ಸಂಹಾರ ದುರ್ಗಾಂಬಾ



ಓಂ ಸೌಮ್ಯ ದುರ್ಗಾಂಬಾ



ಓಂ ದಶಭುಜ ದುರ್ಗಾಂಬಾ



# ೫. ಶಕ್ತಿ ಮತ್ತು ಅವಳ ರೂಪ ವೈವಿಧ್ಯ

ದೇವ ಶಬ್ದದ ಸ್ತ್ರೀಲಿಂಗ ರೂಪವೇ ದೇವಿ. ನಮ್ಮ ಪರಂಪರೆಯ ಮಾತೃತ್ವದ ಕಲ್ಪನೆಯೇ ವಿಶಿಷ್ಟವಾದುದು. ಇಡೀ ಸೃಷ್ಟಿಯ ಮತ್ತು ಅದರ ಪಾಲನೆಯ ಮೂಲವೇ ಶಕ್ತಿ. ವೇದಾಂತದ ಪರಬ್ರಹ್ಮನೂ ತಂತ್ರಗಳ 'ದೇವಿ' ಅಥವಾ 'ಶಕ್ತಿ', ಎಲ್ಲವೂ ಒಂದೇ.

ನಮ್ಮ ಪುರಾಣಗಳಲ್ಲಿ, ತಂತ್ರಶಾಸ್ತ್ರಗಳಲ್ಲಿ ಈ ಶಕ್ತಿಯನ್ನು 'ಸ್ತ್ರೀ' ರೂಪವಾಗಿ, ದೇವಿಯಾಗಿ, ಪುರುಷ ದೇವತೆಯ ಸಂಗಾತಿಯಾಗಿ ನೋಡಲಾಗಿದೆ. ಬ್ರಹ್ಮನಿಗೆ ಸರಸ್ವತಿ, ವಿಷ್ಣುವಿಗೆ ಲಕ್ಷ್ಮಿ, ಶಿವನಿಗೆ ಪಾರ್ವತಿ ಹೀಗೆ ಹಲವು ಶತಮಾನಗಳಿಂದ ಸಂಬಂಧಿಸಲಾಗಿದೆ. ನಮ್ಮಲ್ಲಿ ನಡೆದು ಬಂದಿರುವ 'ಮಾತೃಭಾವ' ಪಂಥದ ಮುಖ್ಯ ದೇವತೆಯೇ ಶಿವನ ಸಂಗಾತಿ ಪಾರ್ವತಿ. ಮಾತೃ ಪೂಜೆಯು ಅತಿ ಶಕ್ತಿಯುತವಾಗಿ ಬೇರೂರಿದೆ. ಸಪ್ತ ಮಾತೃಕೆಯರಾಗಿ, ನವ ವಿಧ ದೇವಿ-ದುರ್ಗೆಯರಾಗಿ ಮಾತೃತ್ವದ ಕಲ್ಪನೆ ನಮ್ಮಲ್ಲಿ ದಟ್ಟವಾಗಿದೆ. ಎಲ್ಲ ದೇವತೆಗಳು ಪ್ರತಿನಿಧಿಸುವುದು ಒಂದೇ ಶಕ್ತಿಯನ್ನು ಎಂದು ನಮ್ಮ ಪರಂಪರೆಯ ಪಠ್ಯಗಳು ಹೇಳಿವೆ.

ಬ್ರಾಹ್ಮೀ, ಮಾಹೇಶ್ವರೀ, ಕೌಮಾರಿ, ಕಾರ್ತಿಕೇಯಿ, ವೈಷ್ಣವಿ, ವಾರಾಹಿ, ಇಂದ್ರಾಣಿ ಎಂಬ ಏಳು ರೂಪಗಳೂ ಒಂದೇ ಶಕ್ತಿಯ ಮೂಲವನ್ನು ಅರಗಿಸಿಕೊಂಡಿದ್ದರೆ, ಈ ರೂಪಗಳ ಜತೆಗೆ ಮತ್ತೊಂದು ರೂಪ ಚಾಮುಂಡಿಯನ್ನೂ ಸೇರಿಸಿ ಅಷ್ಟಮಾತೃಕೆಯೆಂದೂ ಹೇಳಲಾಗಿದೆ. ಹೀಗೆ ಶಕ್ತಿಯ ಸಾತ್ವಿಕ ಮತ್ತು ಉಗ್ರ ರೂಪಗಳೆರಡೂ ಕಾಣಿಸಿಕೊಂಡಿವೆ.

ದೇವೀ ಸೂಕ್ತದಲ್ಲಿ 'ನನ್ನಿಂದಲೇ ಪ್ರಪಂಚವು ಜೀವಿಸಿದೆ. ಅನ್ನ ಗ್ರಹಣ ಮತ್ತು ಶ್ರವಣಾದಿ ಕೆಲಸಗಳೆಲ್ಲವೂ ನನ್ನಿಂದಲೇ ಕ್ರಿಯಾಶೀಲವಾಗಿವೆ. ಯಾರು ನನ್ನನ್ನು ಅವಹೇಳನ ಮಾಡುವರೋ ಅವರು ನಾಶವಾಗುವರು.

ನೀನು ಶ್ರದ್ಧಾವಾನ್ ಆದ ಕಾರಣವೇ ನಾನು ನಿನಗೆ ಎಲ್ಲವನ್ನೂ ಹೇಳುತ್ತಿರುವೆನು. ಬ್ರಹ್ಮ ಶಕ್ತಿಯ ಹಿಂಸಕರಾದ ಅಸುರರನ್ನು ನಾಶ ಮಾಡುವ ರುದ್ರನ ಕೈಯಲ್ಲಿ ನಾನು ಶಕ್ತಿ ರೂಪಳಾಗಿ ಅವನ ಬಾಹುಬಲದಲ್ಲಿ ನೆಲೆಸಿದ್ದೆನು. ಲೋಕ ರಕ್ಷಣೆಗಾಗಿ ನಾನು ಯುದ್ಧದಲ್ಲಿ ನಿರತಳಾಗಿದ್ದೆನು. ನಾನು ಆಕಾಶ ಮತ್ತು ಪೃಥ್ವಿಗಳಲ್ಲಿ ನೆಲೆಸಿರುವೆನು" ಎಂಬ ಮಾತುಗಳಿವೆ. ಶಕ್ತಿಯು ಪ್ರಸನ್ನಳಾದಾಗ ಮಾತ್ರ ಮುಕ್ತಿಗೆ ಸಹಾಯಕಳಾಗುವಳು. ಈ ವಿಶ್ವವೇ ಅವಳ ದೇಹ, ಅಖಂಡ ಬ್ರಹ್ಮಾಂಡ ವ್ಯಾಪಿಯೇ ಅವಳು. ಹಾಗಾಗಿಯೇ 'ಎಲ್ಲಿಂದ ಜೀವ ಜಗತ್ತು ಪ್ರಭೃತಿ ಸಮಸ್ತವೂ ಬರುವವೋ ಅವುಗಳೆಲ್ಲದರ ಕಾರಣ ಸ್ವರೂಪಿಣಿ ನಾನೇ' ಎಂದೂ ಶಕ್ತಿಯ ಪರವಾದ ಹೇಳಿಕೆಗಳು ಉಲ್ಲೇಖಿಸಲ್ಪಟ್ಟಿವೆ.

ಋಕ್‌ದೇವಿ ಸೂಕ್ತದ 'ನಾನೇ ಸಮಸ್ತ ಜಗತ್ತಿನ ಈಶ್ವರಿ; ಧನವನ್ನು ದಯಪಾಲಿಸುವುವವಳೂ ನಾನೇ; ನಾನೇ ಜ್ಞಾನವುಳ್ಳವಳು ಮತ್ತು ಯಜ್ಞಾರ್ಹರಾದ ದೇವತೆಗಳ ಮಧ್ಯದಲ್ಲಿ ಶ್ರೇಷ್ಠಳಾದವಳು' ಎಂಬ ಮಾತುಗಳನ್ನೂ ಗಮನಿಸಿ ನಮ್ಮ ಪರಂಪರೆಯು ದೇವೀ ಮಹಿಮೆಯನ್ನು ಪೂಜಿಸಿತು: ಧನ್ಯವಾಯಿತು.

### ಕಾಳಿಕಾಂಬಾ

ಶ್ರೀ ಬ್ರಾಹ್ಮೀಯ ಚಿತ್ರ ಕರ್ಮ ಶಾಸ್ತ್ರದ 'ಮಾನಾಧಿಕರಣಮ್' ಅಧ್ಯಾಯದಲ್ಲಿ ದೇವಮೂರ್ತಿಗಳನ್ನು ನಿರ್ಮಿಸಲು ಅನುಸರಿಸುವ ಮಾನಾದಿ ವಿವರಗಳು, ತಾಲಮಾನ ಕ್ರಮಗಳಲ್ಲಿ ಅನುಸರಿಸಬೇಕಾಗಿರುವ ವಿಭಿನ್ನ ಕ್ರಮಗಳು ಇತ್ಯಾದಿಗಳನ್ನು ವಿವರಿಸಲಾಗಿದೆ. ಮೂರ್ತಿ ನಿರ್ಮಾಣವು ಮೂಲತಃ ಅಳತೆಯಿಂದಲೇ ಆರಂಭವಾಗುತ್ತದೆ. ಪ್ರಸ್ತುತ ದೇವನಹಳ್ಳಿ ಚೆನ್ನಕೇಶವ ಆಚಾರ್ಯರ ಕಾಳಿಕಾಂಬಾ ಮೂರ್ತಿಗಳ ರೇಖಾಚಿತ್ರಗಳು ನವತಾಲಗಳಲ್ಲಿ ಮೂಡಿಬಂದಿವೆ. ಎಲ್ಲಾ

ತಾಲಗಳಿಗೂ ಮೂಲವಾಗಿರುವ ತಾಲವೇ ನವತಾಲವು. ಈ ತಾಲಮಾನದ ಕ್ರಮದಿಂದಲೇ ಉಳಿದೆಲ್ಲ ತಾಲಮಾನಗಳು ರೂಪುಗೊಂಡಿವೆ. ನವತಾಲದಲ್ಲಿ ರೂಪಿಸಬೇಕಾದ ದೇವತೆಗಳು, ದೇವಿಯರು ನಿರ್ದಿಷ್ಟವಾಗಿ ಗುರುತಿಸಲ್ಪಟ್ಟಿದ್ದಾರೆ. ಶ್ರೀ ಬ್ರಾಹ್ಮೀಯ ಚಿತ್ರ ಕರ್ಮ ಶಾಸ್ತ್ರದಲ್ಲಿ 'ಅಧಮ ನವತಾಲ ಸ್ತ್ರೀ ಮಾನ' ಎಂಬ ವಿಶಿಷ್ಟ ವಿವರಗಳೇ ಇವೆ. ಇಲ್ಲಿ ನವತಾಲದಲ್ಲಿ ರೂಪಿಸುವ ಸ್ತ್ರೀ ಮೂರ್ತಿಶಿಲ್ಪಗಳು ಉದಾಹರಿಸಲ್ಪಟ್ಟಿವೆ. ಪ್ರಸ್ತುತ ಪ್ರಕಟಣೆಯಲ್ಲಿ ಚೆನ್ನಕೇಶವಾಚಾರ್ಯರು ತಮ್ಮ 'ದೇವತಾದಿ ಚಿತ್ರಸಾರ ಸಂಗ್ರಹ'ದಲ್ಲಿ ರೇಖಿಸಿರುವ ಕಾಳಿಕಾಂಬಾ ಮೂರ್ತಿಯ ಒಂಭತ್ತು ರೂಪ ಕಲ್ಪನೆಗಳಿವೆ.

ಸಕಲಾಧಿಕಾರ ಪಠ್ಯದ ಮೂಲದ ಕಲ್ಪನೆಗಳು ಇವು ಆಗಿರಬಹುದು. ೧. ಭದ್ರ ಕಾಳಿಕಾಂಬಾ, ೨. ಚಂಡಿ ಕಾಳಿಕಾ, ೩. ಚಂದ್ರ ಕಾಳಿಕಾಂಬಾ, ೪. ವಿಜಯ ಕಾಳಿಕಾಂಬಾ,

೫. ಶ್ರೀ ಭೌಮ ಕಾಳಿಕಾಂಬಾ, ೬. ಓಂ ದುರ್ಗೆ ಕಾಳಿಕಾಂಬಾ, ೭. ಶಕ್ತಿ ಕಾಳಿಕಾಂಬಾ,

೮. ಶ್ರೀ ಓಂ ಕೃಷ್ಣ ಕಾಳಿಕಾಂಬಾ, ೯. ಓಂ ಕಾಪಾಲ ಕಾಳಿಕಾಂಬಾ ಎಂಬ ಹೆಸರಿನ ಶಕ್ತಿಯುತ ರೇಖಾ-ತಾಲಮಾನ ಚಿತ್ರಗಳಿವು.

ಮುಮ್ಮಡಿ ಕೃಷ್ಣರಾಜ ಒಡೆಯರ (ಕ್ರಿ.ಶ. ೧೭೯೪-೧೮೬೮) ಶ್ರೀ ತತ್ವನಿಧಿಯ ಮೊದಲನೆಯ ನಿಧಿ 'ಶಕ್ತಿ ನಿಧಿ'ಯಲ್ಲಿ ಮಹಾಕಾಳಿಯ ಸ್ವರೂಪವನ್ನು (ಚಂಡೀಕಲ್ಪ) "ಖಡ್ಗ, ಚಕ್ರ, ಗದೆ, ಬಾಣ, ಬಿಲ್ಲು, ಪರಿಘ, ಶೂಲ, ಭೃಶುಂಡಿ, ಕಪಾಲ ಮತ್ತು ಶಂಖ ಇವುಗಳನ್ನು ಕೈಗಳಿಂದ ಧರಿಸಿರುವ, ಮೂರು ಕಣ್ಣುಗಳುಳ್ಳ, ಎಲ್ಲ ಅಂಗಗಳಲ್ಲಿ ಒಡವೆಗಳನ್ನು ತುಂಬಿರುವ, ಇಂದ್ರನೀಲ ಮಣಿಯ ಕಾಂತಿಯಿಂದ ಶೋಭಿಸುವ, ಹತ್ತು ಮುಖಗಳನ್ನೂ, ಪಾದಗಳನ್ನೂ ಹೊಂದಿರುವ ಮಹಾಕಾಳಿಯ ಸೇವೆಯನ್ನು ಮಾಡುತ್ತೇನೆ. ವಿಷ್ಣುವು ನಿದ್ರೆಯಲ್ಲಿದ್ದಾಗ ಮಧುಕೈಟಭರ ಸಂಹಾರಕ್ಕಾಗಿ, ಬ್ರಹ್ಮನು ಅವಳನ್ನು ಸ್ತೋತ್ರ ಮಾಡಿದನು." (ನೀಲ ವರ್ಣ) ೨೫. (ಅನುವಾದ: ವಿದ್ವಾನ್ ಹೆಚ್. ಶಂಕರ ಗಣಪತಿ ಫಾಟಕ್) ಎಂದು ಕಾಳಿಯನ್ನು ಧ್ಯಾನಿಸಲಾಗಿದೆ.

೧. ಭದ್ರ ಕಾಳಿಕಾಂಬಾ

೨. ಚಂಡಿ ಕಾಳಿಕಾಂಬಾ

೩. ಚಂದ್ರ ಕಾಳಿಕಾಂಬಾ

೪. ವಿಜಯ ಕಾಳಿಕಾಂಬಾ

೫. ಶ್ರೀ ಭೌಮ ಕಾಳಿಕಾಂಬಾ

೬. ಓಂ ದುರ್ಗೆ ಕಾಳಿಕಾಂಬಾ

೭. ಶಕ್ತಿ ಕಾಳಿಕಾಂಬಾ

೮. ಓಂ ಕೃಷ್ಣ ಕಾಳಿಕಾಂಬಾ

೯. ಓಂ ಕಾಪಾಲ ಕಾಳಿಕಾಂಬಾ

❑

ಭದ್ರಕಾಳಿಕಾಂಬಾ



ವಿಜಯ ಕಾಳಿಕಾಂಬಾ



ಓಂ ಕೃಷ್ಣ ಕಾಳಿಕಾಂಬಾ



# ೬. ಸಪ್ತ ಮಾತೃಕಾ ರೂಪಗಳು

ದುರ್ಗಾಸಪ್ತಶತಿಯು ಶಕ್ತಿ ದೇವತೆಯ ವಿಶಿಷ್ಟ ವಿವರಗಳಿಂದ ಕೂಡಿದೆ. ಇದು ಮಾತೃ ಭಾವಪಂಥದ ಮೂಲಭೂತ ಪಠ್ಯಗಳಲ್ಲಿ ಒಂದು. ಕೌಶಿಕೀ ದುರ್ಗೆಯು ರಕ್ತ ಬೀಜಾಸುರನೊಡನೆ ಯುದ್ಧ ಮಾಡುವಾಗ ಅವನನ್ನು ನಿಗ್ರಹಿಸಲು ತಾನೇ ತನ್ನ ದೇಹದಿಂದ ಏಳು ರೂಪಗಳಾಗಿ ಹೊರ ಬಿದ್ದಳು. ಈ ಏಳು ರೂಪಗಳೇ ಪ್ರಸ್ತುತ 'ಸಪ್ತ ಮಾತೃಕೆ'ಯರೆಂದು ಗುರುತಿಸಲ್ಪಡುತ್ತಿವೆ. ಇವರೇ 'ಏಳು ಪುಟ್ಟ ಮಾತೆ'ಯರಾದ ಬ್ರಾಹ್ಮಿ, ಮಾಹೇಶ್ವರಿ, ವೈಷ್ಣವಿ, ವಾರಾಹೀ, ಐಂದ್ರೀ ಅಥವಾ ಇಂದ್ರಾಣಿ, ಕೌಮಾರಿ, ಚಂಡಿಕಾ ದೇವಿಯರು. ಈ ಹೆಸರುಗಳ ಮೂಲವೇ ಸೂಚಿಸುವಂತೆ ಬ್ರಹ್ಮನ, ಈಶ್ವರನ, ವಿಷ್ಣುವಿನ, ಯಜ್ಞ ವರಾಹ ರೂಪದ ಹರಿಯ, ಇಂದ್ರನ, ಕುಮಾರನ, ನರಸಿಂಹನ ತೇಜೋ ರೂಪಗಳು ಎಂದು ಹೇಳಲಾಗಿದೆ. (ಈ ಎಲ್ಲಾ ದೇವಿಯರ ಲಕ್ಷಣಗಳನ್ನು ನೃಸಿಂಹ ಪ್ರಸಾದದಲ್ಲಿ ಧ್ಯಾನಿಸಲಾಗಿದೆ. 'ಶಕ್ತಿ ನಿಧಿ'ಯಲ್ಲಿಯೂ ವಿವರಿಸಲಾಗಿದೆ.) ಹಾಗಾಗಿಯೇ ಈ ಸಪ್ತ ಮಾತೃಕೆಯರು ತಮ್ಮ ಮೂಲದೇವತೆಗಳ ರೂಪ, ಆಯುಧ, ವಾಹನಗಳನ್ನು ಅಲಂಕರಿಸಿ ಕೊಂಡಿದ್ದಾರೆ. ದುರ್ಗಾ ಸಪ್ತಶತಿಯು ಹೇಳುವಂತೆ ದೇವೀ ರೂಪವು ಎಲ್ಲಾ ದೇವತೆಗಳ ತೇಜಃ ಪುಂಜದ, ಶಕ್ತಿ ಸಮೂಹದ ನಾರೀ ರೂಪವೇ ಆಗಿದೆ. ಕೆಲವೊಮ್ಮೆ ಚಾಮುಂಡಿಯು ಚಂಡಿಕಾ ಅಥವಾ ನಾರಸಿಂಹಿಯ ಸ್ಥಾನವನ್ನು ತುಂಬುತ್ತಾಳೆ. ಮೂಲ ಮಾತೆಯಾದ ದುರ್ಗಾ ಮಹಾಲಕ್ಷ್ಮಿಯನ್ನು ಸೇರಿಸಿದರೆ ಈ ಮಾತೃಕೆಯರು ಉಂಟಾಗುತ್ತಾರೆ. ತಂತ್ರಶಾಸ್ತ್ರದಲ್ಲಿ ಈ ಏಳು ಮಾತೃಕೆಯರ ಕುರಿತ ಅದರದೇ ಆದ ವಿಶಿಷ್ಟ ವ್ಯಾಖ್ಯಾನವಿದೆ.

ಕೆಲವೊಮ್ಮೆ ತಂತ್ರಶಾಸ್ತ್ರದ ಅನುಯಾಯಿಗಳು ಸಪ್ತ ಮಾತೃಕೆಯರ ಬಗ್ಗೆ ನಿಗೂಢತೆಯ ಪ್ರತಿಪಾದನೆಯನ್ನೂ ಮಾಡಿದ್ದಾರೆ. ಅವರ ದೃಷ್ಟಿಯಲ್ಲಿ ನಾದದ ಶಕ್ತಿಯನ್ನು ಬ್ರಾಹ್ಮಿಯು ಪ್ರತಿನಿಧಿಸುತ್ತಾಳೆ. ಈ ನಾದವು ಸಮಸ್ತ ಸೃಷ್ಟಿಯ ಮೂಲವಾದ, ಇನ್ನೂ ಅಸ್ತಿತ್ವವಿಲ್ಲದೆ ಇರುವ ಶಬ್ದ. ಪ್ರಣವ ಅಥವಾ ಓಂಕಾರವು ಪ್ರತಿನಿಧಿಸುವ ಶಕ್ತಿಯೂ ಇದೂ ಒಂದೇ ಆಗಿವೆ. ಬ್ರಾಹ್ಮೀಯು ವಿಶ್ವವನ್ನು ಸೃಷ್ಟಿಸಿದಾಗ, ಆ ಸೃಷ್ಟಿಗೆ ಒಂದು ಸ್ಪಷ್ಟ ಆಕಾರವನ್ನು ಕೊಡುವುದು ವೈಷ್ಣವಿಯ ಶಕ್ತಿ. ವಿಶ್ವದಲ್ಲಿಯ ಸಮಮಿತಿ, ಸುಂದರತೆ, ಸುಸಂಘಟಿತತೆ, ಸುವ್ಯವಸ್ಥೆಗಳೆಲ್ಲವೂ ವೈಷ್ಣವೀಯ ಕೆಲಸ ಎಂದೂ ಹೇಳಲಾಗಿದೆ. ಮಾಹೇಶ್ವರಿಯು ಸೃಷ್ಟಿಯಾದ ಜೀವಿಗಳಿಗೆ ಪ್ರತ್ಯೇಕ ವ್ಯಕ್ತಿತ್ವ/ಅಸ್ಮಿತೆಯನ್ನು ನೀಡುವ ವಿಶಿಷ್ಟ ಶಕ್ತಿಯ ಪ್ರತಿನಿಧಿತಳೇ ಆಗಿದ್ದಾಳೆ. ಚಿರಯೌವನೆಯಾದ ಕೌಮಾರಿಯು ವಿಕಾಸಿಸುತ್ತಿರುವ ಆತ್ಮದಲ್ಲಿ ಸದಾ ಇದ್ದೇ ಇರುವ ಮಹತ್ವಾಕಾಂಕ್ಷೆಯ ಬಲವನ್ನು ಪ್ರತಿನಿಧಿಸುವಳು. ವಾರಾಹಿಯು ಸುಖಪಡುವ, ಸರ್ವವನ್ನೂ ನುಂಗಿ ನೊಣೆಯುವ ಶಕ್ತಿ. ಅವಳಿಂದಲೇ ಜೀವಜಾಲಕ್ಕೆ ಆಹಾರವು ದೊರಕುತ್ತದೆ; ಸುಖಗಳೂ ಲಭ್ಯವಾಗುತ್ತವೆ.

ಇಂದ್ರಾಣಿ (ಐಂದ್ರೀ)ಯು ಜಾಗೃತ ಏಕಾಗ್ರತೆಯ ಶಕ್ತಿ. ಅಷ್ಟೇ ಅಲ್ಲ, ಹೃದಯದಲ್ಲಿನ ಆಧ್ಯಾತ್ಮಿಕ ಎಚ್ಚರದ, ಆಕಾಂಕ್ಷೆಯ ಶಕ್ತಿ. ಮನಸ್ಸೇ ರಕ್ತ ಬೀಜಾಸುರ. ಹಾಗಾಗಿ ಅದರಿಂದ ಹೊರಬಿದ್ದ ಒಂದೊಂದು ಚಿಂತನಾಲಹರಿಯ ಅಲೆಯೂ ಮತ್ತೊಂದಕ್ಕೆ ದಾರಿ ಮಾಡಿಕೊಡುವುದು. ಚಾಮುಂಡಾ ಈ ರಕ್ತ ಬೀಜಾಸುರನನ್ನು ಸಂಹರಿಸುವುದು ಅಂದರೆ ಆಧ್ಯಾತ್ಮಿಕ ಪ್ರಜ್ಞೆಯನ್ನು ಜಾಗೃತಗೊಳಿಸುವುದರ ಮೂಲಕ ಮನಸ್ಸಿನ ಅನೇಕ ವಿಧವಾದ ಪರಿತಾಪಗಳನ್ನು ನಾಶ ಮಾಡುವುದು ಎಂದೂ ಹೇಳಲಾಗಿದೆ. ಶಿಲ್ಪ ಅಥವಾ ರೇಖಾಚಿತ್ರ ಸೃಷ್ಟಿಯಲ್ಲಿ ಈ ದೇವಿಯರನ್ನು ಸಾಮಾನ್ಯವಾಗಿ ಎರಡು ಕೈಗಳಲ್ಲಿ ಪದ್ಮವನ್ನೂ, ತಲೆಬುರುಡೆಯನ್ನು ಹಿಡಿದಿರುವಂತೆ ಕೆಂಪು ಬಣ್ಣದಿಂದ ಚಿತ್ರಿಸುವ ಪರಿಪಾಠವು ಇದೆ. ದೇವನ ಹಳ್ಳಿಯ ಚೆನ್ನಕೇಶವ ಆಚಾರ್ಯರು ಇದೇ ಹಾದಿಯಲ್ಲಿ ನಡೆದು ರೇಖಿಸಿದ್ದಾರೆ. ಆದರೂ ಈ ಶಕ್ತಿ ದೇವಿಯರು ಹಲವು ದೇವರುಗಳ ಶಕ್ತಿಯ ಸಾಂಕೇತಿಕ ರೂಪಗಳಾಗಿರುವುದರಿಂದ, ಅವರನ್ನು ಆಯಾ ದೇವರುಗಳ ಸ್ತ್ರೀ ರೂಪದಂತೆಯೂ ರೂಪಿಸುವರು.

ಮಾನಸೋಲ್ಲಾಸದ ತೃತೀಯ ವಿಂಶತಿಯಲ್ಲಿ ಮಾತೃಕೆಗಳ ಲಕ್ಷಣದಲ್ಲಿ ಬ್ರಹ್ಮಾಣಿ, ವೈಷ್ಣವಿ, ಮಾಹೇಶ್ವರಿ, ಕೌಮಾರೀ, ವಾರಾಹೀ, ವಾಸವೀ ಮತ್ತು ಏಳನೆಯ ನಾರಸಿಂಹಿಯು ತಮ್ಮ ತಮ್ಮ ಮಾತೃಕಾರೂಪ ಹಾಗೂ ಆಯುಧಗಳ ಲಕ್ಷಣದಿಂದ ಸಮಾನರಾಗಿರುತ್ತಾರೆ. ವಿದ್ವಾಂಸರಾದ ಚಿತ್ರಕಾರರು ಆಯಾ ವಾಹನಗಳಿಂದ ಕೂಡಿರುವಂತೆ ಮಾತೃಕೆಗಳನ್ನು ಚಿತ್ರಿಸಬೇಕು ಎಂದು ಹೇಳಲಾಗಿದೆ.

## ೧. ಬ್ರಾಹ್ಮೀ ದೇವತೆ

ಬ್ರಾಹ್ಮಿಯು ನಾಲ್ಕು ಮುಖಗಳನ್ನು, ಆರು ಭುಜಗಳನ್ನು ಹೊಂದಿದ್ದು ಹಂಸದ ಮೇಲೆ ಕುಳಿತಿದ್ದಾಳೆ. ಹಳದಿ ವರ್ಣ ಶೋಭಿತೆಯೂ, ಭೂಷಣಗಳಿಂದ ಕೂಡಿರುವವಳೂ ಆಗಿದ್ದಾಳೆ. ಕೃಷ್ಣ ಮೃಗದ ಚರ್ಮವನ್ನು ಉತ್ತರೀಯವಾಗಿ (ಎಡ ಭುಜದಿಂದ ಹಾಕುವ ಕ್ರಮ) ಧರಿಸಿರುವಳು. ವರದ ಮುದ್ರೆ, ಯಜ್ಞಸಾಧನ ಪಾತ್ರೆ (ಕುಂಡಿಕೆ) ಇವುಗಳನ್ನು ಬಲಗೈಗಳಲ್ಲಿ ಮತ್ತು ಎಡಗೈಗಳಲ್ಲಿ ಪುಸ್ತಕ, ಸಣ್ಣ ಪಾತ್ರೆ (ಕುಂಡಿಕೆ) ಹಾಗೂ ಅಭಯ ಮುದ್ರೆಯನ್ನು ಧರಿಸಿರುವಳು ಎಂದು ಮುಮ್ಮಡಿಯವರ ಶಕ್ತಿ ನಿಧಿಯಲ್ಲಿ ಧ್ಯಾನಿಸಲಾಗಿದೆ.

## ೨. ಮಾಹೇಶ್ವರಿ ದೇವಿ

ನರಸಿಂಹ ಪ್ರಸಾದದಲ್ಲಿ ವಿವರಿಸಿರುವಂತೆ ಮಾಹೇಶ್ವರಿಯು ಎತ್ತನ್ನು ಏರಿರುವಳು. ಪಂಚಮುಖಿ, ಮೂರು ಕಣ್ಣುಗಳು, ದವಳ ವರ್ಣ, ದಶ ಭುಜಗಳನ್ನು ಹೊಂದಿದ್ದು ಚಂದ್ರ ರೇಖೆಯಿಂದ ಅಲಂಕೃತಳಾಗಿದ್ದಾಳೆ. ಕೈಗಳಲ್ಲಿ ಖಡ್ಗ, ವಜ್ರ, ತ್ರಿಶೂಲ, ಕೊಡಲಿ, ಅಭಯ ಮುದ್ರೆ, ವರದ ಮುದ್ರೆ, ಪಾಶ, ಘಂಟೆ, ಸರ್ಪ, ಅಂಕುಶಗಳನ್ನು ಧರಿಸಿದ್ದಾಳೆ ಎಂದು ಮುಮ್ಮಡಿಯವರ ಶಕ್ತಿ ನಿಧಿಯಲ್ಲಿ ವರ್ಣಿಸಲಾಗಿದೆ.

## ೩. ಕೌಮಾರಿ ದೇವತಾ

ನರಸಿಂಹ ಪ್ರಸಾದದಲ್ಲಿ ವರ್ಣಿಸಿರುವ ಕೌಮಾರೀ ದೇವತಾ ರೂಪವು ಮುಮ್ಮಡಿ ಕೃಷ್ಣರಾಜ ಒಡೆಯರ 'ಶ್ರೀ ತತ್ತ್ವನಿಧಿ'ಯ ಶಕ್ತಿ ನಿಧಿಯಲ್ಲಿ ಉಲ್ಲೇಖಿಸಲ್ಪಟ್ಟಿದೆ. ಕೌಮಾರಿಯು ಆರು ಮುಖದವಳು, ಮೈ ಬಣ್ಣವು ಕೆಂಪು, ಸುಗುಣಾನ್ವಿತೆ, ಹನ್ನೆರಡು ಬಾಹುಗಳನ್ನುಳ್ಳವಳು. ಮಯೂರ ವಾಹನೆ, ವರದ ಮುದ್ರೆ, ಶಕ್ತಿ, (ಆಯುಧ), ಪತಾಕೆ, ದಂಡ, ಪಾತ್ರೆ, ಬಾಣ ಇವುಗಳನ್ನು ಬಲ ಭುಜಗಳಲ್ಲಿಯೂ, ಎಡ ಭುಜಗಳಲ್ಲಿ ಬಿಲ್ಲು, ಘಂಟೆ, ಕಮಲ, ಕೋಳಿ, ಪರಶು, ಹಾಗೂ ಅಭಯ ಮುದ್ರೆಗಳನ್ನು ಧರಿಸಿರುವಳು ಎಂದು ವರ್ಣಿಸಲಾಗಿದೆ.

## ೪. ವಿಷ್ಣು ಸಂಹಿತಾ ವೈಷ್ಣವಿ

ವೈಷ್ಣವಿ ದೇವತೆಯು ಗರುಡ ಗಾಮಿನಿ, ಶ್ಯಾಮ ವರ್ಣೆ, ಆರು ಭುಜಗಳನ್ನುಳ್ಳವಳು, ವನಮಾಲಾಧಾರಿಣಿ, ವರದ ಮುದ್ರೆ, ಗದೆ, ಹಾಗೂ ಕಮಲಗಳನ್ನು ಬಲಗೈಗಳಲ್ಲಿಯೂ, ಎಡಗೈಗಳಲ್ಲಿ ಶಂಖ, ಚಕ್ರ, ಮತ್ತು ಅಭಯ ಮುದ್ರೆಗಳನ್ನು ಧರಿಸಿದ್ದಾಳೆ. ಓರೆ ನೋಟದ ವೈಷ್ಣವಿ ದೇವಿಯು ಹೊಳೆಯುವ ಭುಜಗಳನ್ನು ಹೊಂದಿದ್ದು ನೀಲ ವರ್ಣ ದೇಹಿ ಆಗಿದ್ದಾಳೆ.

## ೫. ವಾರಾಹಿ ದೇವತಾ

ವಾರಾಹಿಯು ಶ್ಯಾಮ ವರ್ಣೆ ಆಗಿದ್ದಾಳೆ. ಕೋಣದ ವಾಹನದ ಈ ದೇವಿಯು ದೊಡ್ಡ ಹೊಟ್ಟೆಯನ್ನು ಉಳ್ಳವಳು. ಬಲಗೈಗಳಲ್ಲಿ ವರದ ಮುದ್ರೆ, ದಂಡ, ಖಡ್ಗಗಳನ್ನು ಧರಿಸಿದ್ದರೆ, ಎಡಗೈಗಳಲ್ಲಿ ಗುರಾಣಿ, ಪಾತ್ರೆ, ಅಭಯ ಮುದ್ರೆಗಳನ್ನು ಧರಿಸಿದ್ದಾಳೆ. ಮುಖವು ಹಂದಿಯ ಮುಖದಂತಿದ್ದು ಬಾಹುಗಳು ಕಾಂತಿಯುಕ್ತವಾಗಿವೆ.

## ೬. ಐಂದ್ರೀ / ಇಂದ್ರಾಣಿ ದೇವತಾ

ಕನಕ ವರ್ಣದ ಇಂದ್ರಾಣಿ ದೇವಿಯು ಸಾವಿರ ಕಣ್ಣುಗಳನ್ನುಳ್ಳವಳು. ಸೌಮ್ಯ ಸ್ವಭಾವ ಪ್ರದರ್ಶಿಸುವ ದೇವಿಯು ಬಂಗಾರದಂತೆ ಕಾಂತಿಯುಕ್ತಳಾಗಿದ್ದಾಳೆ. ಆನೆಯ ವಾಹನವನ್ನು ಹೊಂದಿರುವ ಇಂದ್ರಾಣಿಯು ಮೇಲಿನ ಬಲಗೈಗಳಲ್ಲಿ ವರದ ಮುದ್ರೆ, ಸೂತ್ರ, ಹಾಗೂ ವಜ್ರಾಯುಧಗಳನ್ನು ಧರಿಸಿರುವಳು. ಎಡಗೈಗಳಲ್ಲಿ ಕಮಲ, ಪಾತ್ರ, ಹಾಗೂ ಕೆಳಭಾಗದ ಕೈಯಲ್ಲಿ ಅಭಯ ಮುದ್ರೆಯನ್ನು ಧರಿಸಿರುವಳು.

## ೭. ಚಂಡಿಕಾ ದೇವತಾ

ಶ್ವೇತ ವರ್ಣದ ಚಂಡಿಕಾ ದೇವತೆಯು ಮಂಗಳ ಸ್ವರೂಪಿಣಿ, ಸಿಂಹಗಾಮಿನಿ, ಜಟಾಯುತೆ, ದುಂಡಾದ ಮೂರು ಕಣ್ಣುಗಳನ್ನುಳ್ಳವಳು. ವರದ ಮುದ್ರೆ, ಶೂಲ, ಕತ್ರಿಕಾ (ಪಾಠಃ ಸಣ್ಣ ಚೂರಿ) ಇವುಗಳನ್ನು ಬಲಗೈಗಳಲ್ಲಿಯೂ, ಎಡಗೈಗಳಲ್ಲಿ ಪಾಶ, ಪಾತ್ರೆ, ಅಭಯ ಮುದ್ರೆ ಇವುಗಳನ್ನು ಧರಿಸಿದ್ದಾಳೆ.

❏



ಕೌಮಾರಿ ದೇವತಾ



ವಿಷ್ಣು ಸಂಹಿತಾ ವೈಷ್ಣವಿ



ಐಂದ್ರೀ / ಇಂದ್ರಾಣಿ ದೇವತಾ



## ಚಂಡಿಕಾ ದೇವತಾ



# ೭. ಶಕ್ತಿ ದೇವತೆಯ ಹಲವು ರೂಪಗಳು

ತಂತ್ರಶಾಸ್ತ್ರದಲ್ಲಿ ದಶ ಮಹಾವಿದ್ಯೆಗಳೆಂದು ಕರೆಯಲ್ಪಡುವ ಶಕ್ತಿ ದೇವಿಯ ಹತ್ತು ಮುಖಗಳನ್ನು ವಿವರಿಸಲಾಗಿದೆ. ಮನುಷ್ಯನು ತಿಳಿಯಬೇಕಾದ ಏನೆಲ್ಲವೂ ಇದೆಯೋ ಆ ಅತೀತ ಜ್ಞಾನದ ಹಾಗೂ ಶಕ್ತಿಯ ಪ್ರತಿನಿಧಿಗಳೇ ಈ ದಶ ಮಹಾವಿದ್ಯೆಗಳು. ಕಾಳಿ, ತಾರಾ, ಷೋಡಶೀ, ಭುವನೇಶ್ವರೀ, ಭೈರವೀ, ಛಿನ್ನ ಮಸ್ತಾ (ಕತ್ತರಿಸಿದ ತನ್ನ ತಲೆಯನ್ನೇ ಕೈಯಲ್ಲಿ ಹಿಡಿದು, ತನ್ನ ರಕ್ತವನ್ನೇ ಕುಡಿಯುತ್ತಿರುವ ನಗ್ನ ದೇವತೆ), ಧೂಮಾವತೀ, ಬಗಲಾ, ಮಾತಂಗೀ ಹಾಗೂ ಕಮಲಾ.

'ದುರ್ಗಾ ಸಪ್ತಶತೀ' ಅಥವಾ 'ದೇವೀ ಮಹಾತ್ಮ್ಯ' ಕೃತಿಯಲ್ಲಿ ಉಕ್ತವಾಗಿರುವ ಶಕ್ತಿಯ ಅನೇಕ ಮುಖಗಳಲ್ಲಿ ಮೊದಲು ಉಲ್ಲೇಖಗೊಂಡಿರುವುದು ಯೋಗ ನಿದ್ರಾ, ನಂತರ ಮಹಿಷಾಸುರ ಮರ್ಧಿನಿಯ ಪ್ರಸ್ತಾಪವಿದೆ. ದೇವತೆಗಳ ಎಲ್ಲಾ ಆಯುಧಗಳೇ ಅವಳ ಆಯುಧಗಳು. ಕೌಶಿಕೀ ದುರ್ಗಾ ಎಂಬ ರೂಪವೇ ಮುಂದೆ ಕಪ್ಪಾದ ಶರೀರವುಳ್ಳ ಕಾಳೀ ರೂಪದ ಸೃಷ್ಟಿ. ನಾರಾಯಣೀ, ವಿಂಧ್ಯವಾಸಿನೀ, ರಕ್ತ ದಂತಾ, ಶತಾಕ್ಷಿ, ಶಾಕಂಬರೀ, ದುರ್ಗಾ, ಭೀಮಾ, ಭ್ರಾಮರಿ ಅಥವಾ ಭ್ರಮರಾಂಭಾ ಎಂಬ ಶಕ್ತಿಯ ಹಲವು ಅವತರಣಗಳನ್ನು ಈ ಕೃತಿಯಲ್ಲಿ ಕಾಣಬಹುದು. ಇದೇ ಕೃತಿಯಲ್ಲಿ ದೇವಿಯ ಮೂರು ಮುಖ್ಯವಾದ ರೂಪಗಳ ಬಗ್ಗೆ ವರ್ಣಿಸಲಾಗಿದೆ.

ಮಹಾಕಾಳೀ, ಮಹಾಲಕ್ಷ್ಮೀ, ಮತ್ತು ಮಹಾ ಸರಸ್ವತಿ. ಈ ರೂಪಗಳು ಪೌರಾಣಿಕ ಪಾರ್ವತೀ, ಲಕ್ಷ್ಮೀ, ಮಹಾಸರಸ್ವತಿ ಎಂದು ಭಾವಿಸಲಾಗದು. ಅವು ತಮಸ್, ರಜಸ್ ಮತ್ತು ಸತ್ತ್ವ ಎಂಬ ಮೂರು ಗುಣಗಳಿಗನುಸಾರವಾಗಿ ಮೂಡಿ ಬಂದಿರುವ 'ಮಾಹೇಶ್ವರಿ' ಎಂಬ ಒಂದೇ ಶಕ್ತಿಯ ಪರಮ ಶಕ್ತಿಯ ಪತೀಕಗಳೇ ಆದ ಮೂರು ಮುಖ್ಯ ಆವಿರ್ಭಾವಗಳು.

ಪಾರ್ವತಿಯ ಇನ್ನಿತರ ರೂಪಗಳಲ್ಲಿ ಅನ್ನಪೂರ್ಣಾ, ಅಪರಾಜಿತಾ, ಬಾಲಾ, ಭದ್ರಕಾಳೀ, ಭೂತಮಾತಾ, ಚಾಮುಂಡಾ, (ಗಾಯತ್ರೀ, ಸಾವಿತ್ರೀ ಮತ್ತು ಸರಸ್ವತೀ, ಇವರು ದಿನವೂ ಮೂರು ಬಾರಿ ಜಪ ಮಾಡಲ್ಪಡುವ ಗಾಯತ್ರೀ ಮಂತ್ರದ ಮೂವರು ಅಧಿದೇವತೆಗಳು.) ಇಂದ್ರಾಕ್ಷೀ, ಜಗದ್ಧಾತ್ರೀ, ಕಾಮೇಶ್ವರೀ, ಕಾತ್ಯಾಯನೀ, ಮನೋನ್ಮನೀ, ರಾಜರಾಜೇಶ್ವರಿ, ಶಿವದೂತಿ ಬಹುಮುಖ್ಯವಾದವು.

### ಬನಶಂಕರಿ ಧ್ಯಾನ

ಪದ್ಮ ಪುರಾಣದಲ್ಲಿ ಬನಶಂಕರಿ ದೇವಿಯ ಧ್ಯಾನದ ವಿವರಗಳಿವೆ. ಪ್ರಳಯ ಕಾಲದ ವಹ್ನಿ ರೂಪದ ಹೊಳಪಿನಿಂದ ಸುಂದರಿಯಾಗಿರುವ ಶೂಲ, ಕಪಾಲ, ಬಾಣ, ಬಿಲ್ಲು, ವರ, ಅಭಯ, ಪರಿಘ, ಶಂಖ, ಚಕ್ರ ಮತ್ತು ಗದೆಗಳನ್ನು ಧರಿಸಿರುವ, ಚಂದ್ರಕಲೆಯಿಂದ ಹೊಳೆಯುವ ಕಿರೀಟಧಾರಿ ಬನಶಂಕರಿ. ರತ್ನ ಖಚಿತವಾದ ವಸ್ತ್ರಗಳಿಂದ ಅಲಂಕೃತಳಾದ, ಮೂರು ಕಣ್ಣುಗಳಿರುವ ಬ್ರಹ್ಮ ಮತ್ತು ವಿಷ್ಣುವಿನಿಂದ ಸ್ತೋತ್ರಿಸಲ್ಪಟ್ಟ ಬನಶಂಕರಿಯನ್ನು ಕೆಂಪು ಬಣ್ಣದಲ್ಲಿ ಚಿತ್ರಿಸಬೇಕೆಂದು ವಿವರಿಸಲ್ಪಟ್ಟಿದೆ.

### ಪ್ರತ್ಯಂಗಿರಾದೇವಿ

ಪ್ರತ್ಯಂಗಿರಾ ಧ್ಯಾನದ ವಿವರಗಳು ಪ್ರತ್ಯಂಗಿರಾಕಲ್ಪದಲ್ಲಿವೆ. ಶ್ಯಾಮಲ ಕಾಂತಿಯ ಮೂರು ಕಣ್ಣುಗಳುಳ್ಳ ಸಿಂಹಮುಖಿಯಾದ ನಾಲ್ಕು ಭುಜಗಳುಳ್ಳ ಊರ್ಧ್ವಕೇಶಿಯಾದ, ಸಿಂಹವಾಹಿನಿಯಾದವಳು ಪ್ರತ್ಯಂಗಿರಾ ದೇವಿ. ಆಕೆಯು ತಲೆಗೂದಲ ಮೇಲೆ ಚಂದ್ರ ಚಿಹ್ನೆಯಿರುವವಳೂ ಕಪಾಲ, ಶೂಲ, ಡಮರು ಮತ್ತು ನಾಗಪಾಶಗಳನ್ನು ಧರಿಸಿರುವ ಮಂಗಳ

ಸ್ವರೂಪಿಣಿಯಾದವಳೂ ಆಗಿದ್ದಾಳೆ. ಸಕಲ ಶತೃಗಳನ್ನು ನಾಶ ಮಾಡುವ ದೇವಿಯು ಶ್ಯಾಮ ವರ್ಣದಲ್ಲಿ ಚಿತ್ರಿಸಲ್ಪಡುವವಳು ಎಂದು ಧ್ಯಾನಿಸಲಾಗಿದೆ.

## ಶ್ರೀ ಚಾಮುಂಡೇಶ್ವರಿ ಧ್ಯಾನ

ಚಾಮುಂಡಿಯು ಚಿನ್ನದ ಕಾಂತಿಯನ್ನು ಹೊಂದಿರುವ ಸುಂದರ ರೂಪಿನವಳಾಗಿದ್ದಾಳೆ ಎಂದು ನೃಸಿಂಹ ಪ್ರಸಾದವೆಂಬ ಗ್ರಂಥದಲ್ಲಿ ಹೇಳಲಾಗಿದೆ. ಆಕೆಯು ಮೂರು ಕಣ್ಣುಗಳುಳ್ಳ ಕೋಪಗೊಂಡವಳೂ ಆಗಿದ್ದಾಳೆ. ಆದರೆ ಮೇಲ್ನೋಟಕ್ಕೆ ಮಂದಹಾಸ ಹೊಂದಿರುವಂತೆ ಕಾಣುವಳು. ಸಣ್ಣ ನಡು, ಅಗಲವಾದ ಕಣ್ಣುಗಳುಳ್ಳ ಈಕೆಗೆ ಸುಂದರವಾದ ಸ್ತನಗಳಿವೆ. ಒಂದು ಮುಖ, ಸುಂದರ ಕಂಠ, ಇಪ್ಪತ್ತು ಬಾಹುಗಳನ್ನು ಹೊಂದಿದ್ದಾಳೆ. ಶೂಲ, ಖಡ್ಗ, ಶಕ್ತಿ, ಚಕ್ರ, ಬಾಣ, ಶಂಖ, ವಜ್ರಾಯುಧ, ಅಭಯ, ಡಮರು, ಚೂರಿ, ಆಯುಧಗಳನ್ನು ಬಲಗೈಗಳಿಂದ ಮೇಲಿನಿಂದ ಕೆಳಕ್ಕೆ ಬರುವ ಕ್ರಮದಲ್ಲಿ ದೇವಿಯ ಮಂಗಲ ರೂಪವು ಧರಿಸಿದೆ. ಎಡಭಾಗದ ಹತ್ತು ಕೈಗಳಲ್ಲಿ ಚಾಮುಂಡಿಯು ಕ್ರಮವಾಗಿ ನಾಗ, ಪಾಶ, ಗುರಾಣಿ, ಕೊಡಲಿ, ಅಂಕುಶ, ಬಿಲ್ಲು, ಘಂಟೆ, ಧ್ವಜ, ಗದೆ ಮತ್ತು ಕನ್ನಡಿ ಇವುಗಳನ್ನು ಹಿಡಿದಿರುವ ಕಾಮರೂಪಿಣಿಯೂ ಆಗಿದ್ದಾಳೆ.

ಚಾಮುಂಡಿಯ ಕಾಲಿನ ಕೆಳಗೆ ತುಂಡಾಗಿ ಕೆಳಗೆ ಬಿದ್ದ ಕೋಣನ ತಲೆಯು ಇರುತ್ತದೆ. ಆ ಕೋಣದ ಕುತ್ತಿಗೆಯಿಂದ ಉದ್ಭವಿಸಿದ ಪುರುಷನು ಹೆದರಿದಂತೆ ಕಾಣುತ್ತಿದ್ದು ಕೈಯನ್ನು ಮೇಲಕ್ಕೆ ಎತ್ತಿರುತ್ತಾನೆ. ದೇವಿಯ ಶೂಲದಿಂದ ತಿವಿಯಲ್ಪಟ್ಟ ಅವನು ರಕ್ತವನ್ನು ಕಾರುವಂತೆ ಕಾಣುತ್ತಾನೆ. ಅವನ ಹುಬ್ಬು, ಮೀಸೆ, ಕಣ್ಣುಗಳು ಕೆಂಪಾಗಿವೆ.

ಸಿಂಹವು ಅವನನ್ನು ತಿನ್ನುತ್ತಿದೆ. ಅವನ ಕುತ್ತಿಗೆಯನ್ನು ದೇವಿಯ ಪಾಶವು ಬಿಗಿಯಾಗಿಸುತ್ತಿದೆ. ಚಾಮುಂಡಿಯು ಬಲಗಾಲನ್ನು ಸಿಂಹದ ಮೇಲಿಟ್ಟು ರಾಕ್ಷಸನನ್ನು ಮೆಟ್ಟಿ ನಿಂತಿದ್ದಾಳೆ. ಶಸ್ತ್ರಗಳನ್ನು ಎತ್ತಿ ಹಿಡಿದಿರುವ ಚಂಡಿಯು ಸಮಸ್ತ ಶತೃಗಳನ್ನು ನಾಶ ಮಾಡಬಲ್ಲವಳೂ ಆಗಿದ್ದಾಳೆ. ಚಿನ್ನದ ಬಣ್ಣದಲ್ಲಿ ಹೊಳೆಯುತ್ತಿದ್ದಾಳೆ.

❑

## ಚಂಡಿಕಾದೇವಿ



ಅನ್ನಪೂರ್ಣದೇವಿ ಸರಸ್ವತಿ ದೇವಿ ಭೂದೇವಿ



ವಾರಾಹಿ

ಇಂದ್ರಾಣಿ







ಚತುರ್ಭುಜೆ ಕನ್ನಿಕಾಪರಮೇಶ್ವರಿ ದೇವಿ



ಬ್ರಾಹ್ಮೀದೇವಿ ಕೃಷ್ಣ ಮಹೇಶ್ವರಿದೇವಿ



ಕೌಮಾರಿದೇವಿ

ವೈಷ್ಣವಿದೇವಿ



ವಿದ್ಯಾಸರಸ್ವತಿದೇವಿ ಪಾರ್ವತಿದೇವಿ ಕಾಮಕ್ಷಿದೇವಿ



ಮಹಿಷಾಸುರ ಮರ್ದಿನಿ

ರಾಜರಾಜೇಶ್ವರಿ



ಮನೋನ್ಮಣಿ ಲಲಿತಾದೇವಿ ಭವಾನಿ



ಶಿವದುರ್ಗಾದೇವಿ ಲಕ್ಷ್ಮೀದೇವಿ ಜ್ಯೇಷ್ಠಾದೇವಿ



ಸೌಮ್ಯ ದುರ್ಗಾ　　　　ಭದ್ರಕಾಳಿ　　　　ಕಾಳಿಕಾಂಬ



ಮಹಿಷಾಸುರ ಮರ್ದಿನಿ



ಅಷ್ಟಭುಜ ಚಾಮುಂಡಿ



ದ್ವಾದಶಭುಜ ಚಾಮುಂಡಿ



ಅಷ್ಟಾದಶ ಭುಜಗಳ ಚಾಮುಂಡಿ



# ೮. ಶಿವ

ಮಹಾನ್ ಸದಾಶಿವಃ ಸೋಽಯಂ ರಾಜತೇ ತತ್ರ ಪರ್ವತೇ ।
ಶಕ್ತಯಃ ಪಂಚವಿಖ್ಯಾತಾರುದ್ರಾಶ್ಚ ಬಹವಸ್ತಥಾ ॥
ಸಿದ್ಧಾಶ್ಚ ಋಷಯಸ್ಸರ್ವೇ ಪರಿತಸ್ಸಮುಪಾಸತೇ ।
ಸರ್ವೈಶ್ವರ್ಯೇಣ ಸಂಪನ್ನಸ್ಸರ್ವ ವ್ಯಾಪೀ ಸನಾತನಃ ॥
ಸೇವಿತಃ ಪರಿವಾರೈಶ್ಚ ಸ್ವಸ್ವಕಾರ್ಯ ಸಮುದ್ಯತೈಃ ।
ಆವೃತ್ಯ ರತ್ನಶಿಖರಮೇತದನ್ಯಾನ್ಯಪಿ ದ್ವಿಜಾಃ ॥ *–ಶ್ರೀತತ್ವನಿಧಿಯ ಶಿವನಿಧಿ, ೧೯–೨೧.*

ವಿಶ್ವವನ್ನು ಪ್ರಳಯಕ್ಕೆ ಒಯ್ಯುವ ಜವಾಬ್ದಾರಿಯ ಶಿವನು ತ್ರಿಮೂರ್ತಿಗಳಲ್ಲಿ ಕೊನೆಯ ದೇವತೆ. ಹುಟ್ಟು ಸಾವು, ಸೃಷ್ಟಿ – ನಾಶಗಳ ಹಿಂದಿನ ಶಕ್ತಿಯೇ ಶಿವನು. ಇಂತಹ ಶಿವನನ್ನು ಲಿಂಗರೂಪದಲ್ಲಿ ವಿಧಿವತ್ತಾಗಿ ಪೂಜಿಸುವರು. ಕೆಲವೊಮ್ಮೆ ಅಪರೂಪಕ್ಕೆ ಮನುಷ್ಯರೂ ಪದಲ್ಲಿಯೂ ಪೂಜಿಸಲಾಗುತ್ತಿದೆ. ಶಿವನ ರೂಪ ಕಲ್ಪನೆಯು ಸಾಂಕೇತವಾದುದಾಗಿದೆ ಶಿವನ ಮೂರು ಕಣ್ಣುಗಳು ಬಾಳು, ಬೆಳಕು ಮತ್ತು ಶಾಖದ ದ್ಯೋತಕವಾದ ಚಂದ್ರ, ಸೂರ್ಯ, ಮತ್ತು ಅಗ್ನಿಯನ್ನು ಪ್ರತಿನಿಧಿಸುತ್ತವೆ. ಶಿವನ ಮೂರನೆಯ ಕಣ್ಣು ಜ್ಞಾನ – ವಿವೇಕಗಳನ್ನು ಸೂಚಿಸುತ್ತದೆ. ಚಂದ್ರಸೂರ್ಯರು ಶಿವನ ಎರಡು ಕಣ್ಣುಗಳಾದರೆ ಅಪಾರ ಶಕ್ತಿಯ ಮಾರುತಗಳ ಸಮೇತ ಅಂತರಿಕ್ಷವು ಅವನ ಚಲನಶೀಲ ತಲೆಗೂದಲಾಗ ಬಹುದು. ಹೀಗಾಗಿಯೇ ಅವನು ವ್ಯೋಮಕೇಶ. ಶಿಲ್ಪ\ಚಿತ್ರಗಳಲ್ಲಿ ಶಿವನಿಗೆ ಎರಡು, ಮೂರು, ನಾಲ್ಕು, ಎಂಟು, ಹತ್ತು ಅಥವಾ ಮೂವತ್ತೆರಡು ಕೈಗಳೂ ಇರಬಹುದು. ಈ ಕೈಗಳಲ್ಲಿ ಅವನು ಧರಿಸಿರುವಂತೆ ತ್ರಿಶೂಲ, ಚಕ್ರ, ಕೊಡಲಿ, ಡಮರು ಅಕ್ಷಮಾಲಾ, ಜಿಂಕೆ, ಪಾಶ, ದಂಡ, ಬಿಲ್ಲು, ಮಂತ್ರದಂಡ, ಶೂಲ, ಪದ್ಮ, ಕಪಾಲ, ದರ್ಪಣ, ಖಡ್ಗ, ಇತ್ಯಾದಿಗಳನ್ನು ತೋರಿಸಲಾಗಿದೆ.

ತಾಂಡವ ನೃತ್ಯ ಸಂದರ್ಭದಲ್ಲಿ ಶಿವನು ಹದಿನಾಲ್ಕು ಬಾರಿ ತನ್ನ ಡಮರುವನ್ನು ಬಾರಿಸಿದನೆಂದು, ಆ ಮೂಲಕ ಹುಟ್ಟಿದ ಹಲವು ಶಬ್ದಗಳ ಸಂಯೋಜನೆಯಿಂದ ಅಸಂಖ್ಯವ್ಯಾಕರಣ ಪ್ರಕ್ರಿಯೆಗಳು ಕಾಣಿಸಿಕೊಂಡವೆಂದು ಹೇಳಲಾಗಿದೆ. ಆ ಹದಿನಾಲ್ಕು ಮೂಲಭೂತ ಶಬ್ದಗಳನ್ನು ಮಹೇಶ್ವರ ಸೂತ್ರಗಳು ಎಂದು ಕರೆಯಲಾಗಿದೆ. ಹಾಗಾಗಿ ಡಮರುಗವು ಅಕ್ಷರಗಳ, ವ್ಯಾಕರಣದ ಅಥವಾ ಭಾಷೆಯ ಸಂಕೇತವಾಗಿ ನೋಡಲ್ಪಟ್ಟಿದೆ ; ಸೃಷ್ಟಿಯ ಮೂಲದ ಅನಾಹತ ಶಬ್ದವನ್ನೂ ಸೂಚಿಸುತ್ತದೆ. ಈ ಹಿನ್ನೆಲೆಯಲ್ಲಿ ಇಡೀ ಸೃಷ್ಟಿಯೇ ತನ್ನ ಇಚ್ಛೆಯಂತೆ ನಡೆಯುತ್ತದೆ, ಅದೊಂದು ತನ್ನ ಲೀಲೆ ಎಂದು ಡಮರುಗದ ಮೂಲಕ ಸಂಕೇತಿಸುತ್ತಿರುವಂತಿದೆ. ಇಂತಹ ಶಿವನ ಮೂರ್ತಿಯನ್ನು ಗರ್ಭಗುಡಿಯಲ್ಲಿ ಪ್ರತಿಷ್ಠಾಪಿಸುವ ಪರಂಪರೆ ಇಲ್ಲ; ಮೂಲ ಮೂರ್ತಿಯಾಗಿ ಪೂಜೆಯೂ ಇಲ್ಲ; ಉತ್ಸವ ಮೂರ್ತಿಯಾಗಿ ಬಳಸಲ್ಪಡುತ್ತಿದೆ. ಆದರೆ ಶಿವನ ಲಾಂಛನವಾಗಿ ಲಿಂಗವನ್ನು ಪೂಜಿಸಲಾಗುತ್ತಿದೆ. ಶಿವಲಿಂಗವನ್ನು ಮಂಗಳಕರ ಚಿಹ್ನೆ ಎಂದೇ ನಂಬಲಾಗಿದೆ. ಅಚಲ ಲಿಂಗಗಳನ್ನು ದೇವಾಲಯಗಳಲ್ಲಿ ಶಾಶ್ವತವಾಗಿ ಪ್ರತಿಷ್ಠಾಪಿಸಲಾಗಿರುತ್ತದೆ. ಕಲ್ಲಿನಿಂದ ಶಿಲ್ಪಿಗಳಿಂದ ಸೃಷ್ಟಿಸಲ್ಪಟ್ಟ ಲಿಂಗಗಳು ಮೂರು ಭಾಗಗಳನ್ನು ಹೊಂದಿರುತ್ತವೆ. ಕೆಳಗಿನದು ಚೌಕವಾದ ಬ್ರಹ್ಮಭಾಗ, ಮಧ್ಯದ್ದು ಅಷ್ಟಕೋನಾ ಕೃತಿಯ ವಿಷ್ಣುಭಾಗ, ಇವೆರಡೂ ಭಾಗಗಳನ್ನು ವೇದಿಕೆಯೊಳಗೆ ಕೂರಿಸಿರುವರು. ವೇದಿಯಿಂದ ಹೊರಚಾಚಿದಂತಿರುವ ದುಂಡನೆಯ ಭಾಗವೇ ರುದ್ರಭಾಗ. ಈರೂಪಕ್ಕೇ ಪೂಜೆಯು ಸಲ್ಲುವುದು. ಹಾಗಾಗಿ ಇದು ಪೂಜಾಭಾಗ. ಪೂಜಾಭಾಗದಲ್ಲಿ ತಾಂತ್ರಿಕವಾಗಿ ಕರೆಯಿಸಿ ಕೊಳ್ಳುವ ಕೆಲವು ರೇಖೆಗಳಿರುತ್ತವೆ.

ಶಿವನನ್ನು ಹಲವು ರೂಪಗಳಲ್ಲಿ ಶಿಲ್ಪಿಗಳು ಕಂಡಿದ್ದಾರೆ. ಶಿವನ ಪಂಚಾನನ ಅಥವಾ ಐದು ಮುಖಗಳ ರೂಪವು ಅವುಗಳಲ್ಲಿ ಒಂದು. ಈ ಐದು ಮುಖಗಳನ್ನು ಈಶಾನ, ತತ್ಪುರುಷ, ಅಘೋರ, ವಾಮದೇವ ಮತ್ತು ಸದ್ಯೋಜಾತ ಎಂದು

ಹೆಸರಿಸಲಾಗಿದೆ ; ಪ್ರತಿಮಾತ್ಮಕವಾಗಿ ಹಲವು ರೀತಿಗಳಲ್ಲಿಯೂ ತೋರಲಾಗಿದೆ. ಉಳಿದಂತೆ ಶಿವನನ್ನು ಇನ್ನೂ ಅನೇಕ ರೀತಿಯ ಮೂರ್ತಿಗಳಾಗಿಸಿ ಪೂಜಿಸಲಾಗುತ್ತದೆ.

೧. ಸೌಮ್ಯ ಅಥವಾ ಅನುಗ್ರಹ ಮೂರ್ತಿ, ೨. ಉಗ್ರ, ರೌದ್ರ ಅಥವಾ ಸಂಹಾರ ಮೂರ್ತಿಗಳು, ೩. ನೃತ್ಯ ಅಥವಾ ತಾಂಡವಮೂರ್ತಿ, ೪. ದಕ್ಷಣಾ ಮೂರ್ತಿ, ೫. ಲಿಂಗೋದ್ಭವ ಮೂರ್ತಿ, ೬. ಭಿಕ್ಷಾಟನಾ ಮೂರ್ತಿಗಳನ್ನು ಇಲ್ಲಿ ಹೆಸರಿಸಬಹುದು.

### ವೃಷಭಾರೂಢಮೂರ್ತಿಯ ಧ್ಯಾನ

ಶೈವಾಗಮದ ಕಾರಣಾಗಮದಲ್ಲಿ ವೃಷಭಾರೂಢ ಮೂರ್ತಿಯನ್ನು ವರ್ಣಿಸಲಾಗಿದೆ. ಎತ್ತಿನ ಮೇಲೆ ಕುಳಿತಿರುವ ಶಂಭುವು ತನ್ನ ಬಲಭಾಗದಲ್ಲಿ ಬಳೆಗಳಿಂದ ಅಲಂಕೃತವಾದ ಕೈನಿಂದ ಗಣಪತಿಯನ್ನು ಹಿಡಿದುಕೊಂಡಿದ್ದಾನೆ. ನಂದಿಯ ಬೆನ್ನಿನ ಮೇಲೆ ಕುಳಿತಿದ್ದಾನೆ. ಎಡಗೈಗಳಿಂದ ಉಳಿ ಮತ್ತು ಕೃಷ್ಣಸಾರಂಗ ಮೃಗವನ್ನು ಹಿಡಿದಿದ್ದಾನೆ. ತನ್ನ ಎಡಭಾಗದಲ್ಲಿ ಉಮೆಯನ್ನು ಕೂರಿಸಿಕೊಂಡಿದ್ದಾನೆ. ಇಲ್ಲಿ ಶಿವನ ಆಕಾರವು ಶಾಂತವಾಗಿದೆ. ಮೂರು ಕಣ್ಣುಗಳಿಂದ ಕಂಗೊಳಿಸುತ್ತಿದ್ದಾವೆ. ತಲೆಯಲ್ಲಿ ಜಟೆ ಹಾಗೂ ಕಿರೀಟಗಳಿವೆ. ಅಂತಹ ಪ್ರಸಿದ್ಧನಾದ ವೃಷಭವಾಹನ ರೂಪವು ಇದು.

### ಭಿಕ್ಷಾಟನ ಮೂರ್ತಿಯ ಸ್ವರೂಪ

ಶೈವಾಗಮದ ಕಾರಣಾ ಗಮದಲ್ಲಿ ಭಿಕ್ಷಾಟನ ಮೂರ್ತಿಯನ್ನು ವರ್ಣಿಸಲಾಗಿದೆ. ಈ ಮೂರ್ತಿಯನ್ನು ನಾಲ್ಕು ತೋಳಗಳು, ಮೂರು ಕಣ್ಣುಗಳಿರುವಂತೆ ಚಿತ್ರಿಸಬೇಕು. ಅವನು ನಗ್ನನಾಗಿದ್ದು ಮುಗುಳ್ನಗೆಯಿಂದ ಕೂಡಿದ್ದಾನೆ ಮೈಪೂರ್ತಿ ಬೂದಿಯಿಂದ ಲೇಪಿತ ಗೊಂಡಿದೆ. ದೇಹವು ಹವಳದಂತೆ ಕಾಂತಿಯುಕ್ತವಾಗಿದೆ. ಸೊಂಟದಲ್ಲಿ ಹಾವನ್ನು ಬಿಗಿದುಕೊಂಡಿರಬೇಕು. ಒಂದರ ಮೇಲೊಂದು ಪಾದಗಳಿದ್ದು ಎರಡೂ ಪಾದಗಳಲ್ಲೂ ಪಾದುಕೆಗಳಿರಬೇಕು. ಬಲಗಡೆಯ ಮೇಲು ಕೈಯತುದಿಯಲ್ಲಿ ಜಿಂಕೆಯಿರಬೇಕು. ಕೆಳಗಿನ ಕೈಯಲ್ಲಿ ಡಮರುಗವನ್ನು ಚಿತ್ರಿಸಬೇಕು. ಎಡಗಡೆಯ ಮೇಲುಗೈಯಲ್ಲಿ ತ್ರಿಶೂಲ, ಕೈಳಗೈಯಲ್ಲಿ ನವಿಲು ಗರಿಯು ಇರಬೇಕು. ಶಿವನ ಬಲಪಾದವು ಬಗ್ಗಿರಬೇಕು. ಎಡಪಾದವು ನೇರವಾಗಿ ಚಾಚಿಕೊಂಡಿರಬೇಕು. ಇದು ಸಮಭಂಗೀ ಸ್ಥಾನಕ. ಈ ಭಂಗಿಯಲ್ಲಿರುವ ಮೂರ್ತಿ ಮುಂದೆಹೋಗುತ್ತಿರುವಂತೆ ಚಿತ್ರಿಸಬೇಕು. ಈ ಮೂರ್ತಿಯ ಕೈಯಲ್ಲಿ ಕಪಾಲವಿರಬೇಕು. ಕಪಾಲವನ್ನು ಹಿಡಿದ ಈ ಕೈ ಕುಳಿತಿರುವ ಎತ್ತಿನ ನಾಭಿಸ್ಥಳದ ಮಟ್ಟಕ್ಕೆ ಇರಬೇಕು. ಈ ಎಲ್ಲ ಲಕ್ಷಣಗಳಿಂದ ಕೂಡಿರುವ ಮೂರ್ತಿಯನ್ನು ಭಿಕ್ಷಾಟನ ಮೂರ್ತಿ ಯೆಂದು ಹೇಳಲಾಗಿದೆ. ಆದರೆ ಪ್ರಸ್ತುತ ಪುಸ್ತಕದ ರೇಖಾಚಿತ್ರದಲ್ಲಿ ಚನ್ನಕೇಶವ ಆಚಾರ್ಯರು ಶ್ರೀ ಪರಮೇಶ್ವರ ಮೂರ್ತಿ ಭಿಕ್ಷಾಟನ ಅವತಾರವು ಎಂಬ ವಿವರದೊಂದಿಗೆ ನೀವು ಕಾಣುತ್ತಿರುವ ರೇಖಾಚಿತ್ರವನ್ನು ರೇಖಿಸಿದ್ದಾರೆ. ನಮ್ಮ ಶಿಲ್ಪಿಗಳು, ಕೆಲವೊಮ್ಮೆ ತಮ್ಮ ಅನುಕೂಲಕ್ಕೆ ತಕ್ಕಂತೆಯೂ ಮೂಲ ಮೂರ್ತಿ ಕಲ್ಪನೆಗಳನ್ನು ಬದಲಿಸಿಕೊಳ್ಳುತ್ತಿದ್ದರು.

### ದಕ್ಷಿಣಾ ಮೂರ್ತಿ

ಶೈವಾಗಮದ ಕಾರಣಾಗಮದಲ್ಲಿ ದಕ್ಷಿಣಾಮೂರ್ತಿಯನ್ನು ವಿಶಿಷ್ಟವಾಗಿಧ್ಯಾನಿಸ ಲಾಗಿದೆ. ಶಿವನು ದಕ್ಷಿಣಾ ಮೂರ್ತಿಯ ಸ್ವರೂಪದಲ್ಲಿ ಮೈತುಂಬ ಬೂದಿಯನ್ನು ಬಳಿದು ಕೊಂಡಿರುವುದರಿಂದ ಶರೀರವು ಬೆಳ್ಳಗೆ ಕಾಣುತ್ತದೆ. ತಲೆಯಲ್ಲಿ ಅರ್ಧಚಂದ್ರನನ್ನು ಅಲಂಕರಿಸಿಕೊಂಡಿದ್ದಾನೆ. ಯೋಗಪಟ್ಟದಲ್ಲಿ ಕುಳಿತು ಮನೋಹರನಾಗಿ ಕಾಣುತ್ತಿದ್ದಾನೆ ವಾಖ್ಯಾನ ಪೀಠದಲ್ಲಿ ಪ್ರಸನ್ನನಾಗಿ ಕುಳಿತಿರುವ ದಕ್ಷಣಾಮೂರ್ತಿಯನ್ನು ಶ್ರೇಷ್ಠಸಕಲ ಮುನಿಗಳು ಸೇವಿಸುತ್ತಿದ್ದಾರೆ. ಹಾವುಗಳು ಮೈಗೆ ಸುತ್ತಿಕೊಂಡಿವೆ. ಜಿಂಕೆಯ ಚರ್ಮವನ್ನೂ ತೊಟ್ಟಿದ್ದಾನೆ; ಸಕಲ ಶುಭಕರ ಶರೀರವು ದಕ್ಷಿಣಾ ಮೂರ್ತಿಯದು. ದಕ್ಷಿಣಾ ಮೂರ್ತಿಯ ಬಲಪಾರ್ಶ್ವದಲ್ಲಿ ಜಮದಗ್ನಿ, ವಸಿಷ್ಠ, ಭೃಗು ಮತ್ತು ನಾರದರು, ಎಡಭಾಗದಲ್ಲಿ ಭಾರದ್ವಾಜ, ಶೌನಕ, ಅಗಸ್ತ್ಯ, ಬಾರ್ಗವರು ಇರುವಂತೆ ಚಿತ್ರಿಸಬೇಕು ಎಂದು ಹೇಳಲಾಗಿದೆ ಕೈಲಾಸಪರ್ವತದಲ್ಲಿ ಆಲದ ಮರದ ಕೆಳಗೆ ಸ್ವಾಮಿಯು ಕುಳಿತ್ತಿದ್ದಾನೆ. ಇವನು ಸಕಲರಿಗೂ, ಸಕಲಕ್ಕೂ ಒಡೆಯನು; ಶಾಂತರೂಪನು. ಹೀಗೆ ದಕ್ಷಿಣಾಮೂರ್ತಿಯ ಸ್ವರೂಪವನ್ನು ಹೇಳಲಾಗಿದೆ.

❑



ಶಿವ ಶಕ್ತಿ

ಚಿತ್ರ: ೭ ಪರಶಿವ ಮೂರ್ತಿ





ಶಿವ ಶಕ್ತಿ

# ೯. ಶಿವ–ಭೈರವ ಮೂರ್ತಿ ರೇಖಾ ರೂಪಗಳು

ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರೀ ತತ್ತ್ವನಿಧಿಯ ಶಿವನಿಧಿಯಲ್ಲಿ ಎಂಟು ಜನ ಭೈರವರ ಸಮುದಾಯದ ಧ್ಯಾನ ಶ್ಲೋಕಗಳಿವೆ. ರುದ್ರಯಾಮಳದಲ್ಲಿ ಇರುವಂತೆ ಶಿವನಿಧಿಯಲ್ಲಿ ಉಲ್ಲೇಖಿಸಲಾಗಿದೆ. ಅರವತ್ನಾಲ್ಕು ಜನ ಭೈರವರನ್ನು ಎಂಟೆಂಟು ಭೈರವರನ್ನುಳ್ಳ ಎಂಟು ಗುಂಪುಗಳಲ್ಲಿ ವಿವರಿಸಲಾಗಿದೆ. ಅವುಗಳಲ್ಲಿ ಒಂದೊಂದು ಭೈರವಾಷ್ಟಕ ಗುಂಪಿಗೆ ಒಬ್ಬೊಬ್ಬ ಭೈರವನ ಚಿತ್ರವನ್ನು ಬರೆಯಲಾಗಿದೆ. ಅನಂತರ ಆ ಭೈರವರ ಹೆಸರುಗಳನ್ನು, ಬಣ್ಣಗಳನ್ನೂ ತಿಳಿಸಲಾಗಿದೆ. ಪ್ರಸ್ತುತ ಪುಸ್ತಕದಲ್ಲಿ ನೀವು ನೋಡುತ್ತಿರುವ ಶ್ರೀ ಅಷ್ಟ ಭೈರವ ಮೂರ್ತಿಗಳು ದೇವನ ಹಳ್ಳಿಯ ಚೆನ್ನಕೇಶವ ಆಚಾರ್ಯರು 'ಶಿವ ರಹಸ್ಯ' 'ಭೈರವಾಗಮ' ಮತ್ತು 'ಶಿವ ಧರ್ಮ' ಪಠ್ಯದಿಂದ ಆಯ್ದ ಧ್ಯಾನ ವಿವರಗಳನ್ನು ಆಧರಿಸಿದ ರೇಖಾಚಿತ್ರಗಳೆಂದು ಸೂಚಿಸಿದ್ದಾರೆ. 'ಶಿವರಹಸ್ಯ'ದಿಂದ ಘೋರ ಭೈರವ, ಚಂಡ ಭೈರವ, ಕ್ರೋಧ ಭೈರವ, 'ಭೈರವಾಗಮ'ದಿಂದ ಉನ್ನತ ಭೈರವ, ಕಪಾಲ ಭೈರವ, ಹಾಗೂ 'ಶಿವಧರ್ಮ'ದಿಂದ ಭೀಷಣ ಭೈರವ, ಸಂಹಾರ ಭೈರವ ಮೂರ್ತಿಗಳ ಶಿಲ್ಪ ಸದೃಶರೂಪದ ರೇಖಾಚಿತ್ರ ಕಲ್ಪನೆಗಳಾಗಿವೆ.

❑



ಭೀಷಣ ಭೈರವ ಸಂಹಾರ ಭೈರವ



ನ್ಮತ್ತ ಭೈರವ

ಕಪಾಲ ಭೈರವ

(ಭೈರವಾಗಮ)





ಘೋರ ಭೈರವ



# ೧೦. ಶಿವತಾಂಡವ ನೃತ್ಯ

ಭರತಮುನಿಯ ನಾಟ್ಯ ಶಾಸ್ತ್ರದ ಅಧ್ಯಾಯ ೪ ರಲ್ಲಿ ಶಿವನ ತಾಂಡವ ನೃತ್ಯ ಕುರಿತ ವಿವರಗಳಿವೆ. ೩೨ ಅಂಗಹಾರಗಳು ಪ್ರಸ್ತಾಪಿಸಲ್ಪಟ್ಟಿವೆ. ಅಂಗಹಾರಗಳು ಕರಣಗಳಿಗೆ ಸಂಬಂಧಿಸಿವೆ. ಹಾಗೇ ನೋಡಿದರೆ ಕರಣಗಳೇ ಅಂಗಹಾರದ ಮೂಲ. ನೃತ್ಯದಲ್ಲಿ 'ಕರಣ' ಎಂದರೆ 'ಹಸ್ತ–ಪಾದ–ಸಮಾಯೋಗ' ಎಂದರೆ ಕೈಗಳ ಭಂಗಿಗೆ ಕಾಲುಗಳ ಅನುಗುಣವಾದ ಭಂಗಿ ಹೇಗಿರಬೇಕೆಂಬುದು. ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರೀ ತತ್ವ ನಿಧಿಯ 'ಶಿವನಿಧಿ'ಯಲ್ಲಿ ಶೈವ ಆಗಮ ಮೂಲದಿಂದ ಆಯ್ಕೆ ಮಾಡಿಕೊಂಡು ಆನಂದ ತಾಂಡವ ಎಂಬ ಹೆಸರಿನಿಂದ ಆರಂಭಿಸಿ ಹೇಳಿರುವ ಏಳು ಜನ ತಾಂಡವ ಮೂರ್ತಿಗಳ ವಿವರ/ಧ್ಯಾನ ಶ್ಲೋಕಗಳು ಇವೆ. ಆ ಹೆಸರುಗಳು ಕ್ರಮವಾಗಿ ಆನಂದ ತಾಂಡವ ಮೂರ್ತಿ, ಸಂಧ್ಯಾತಾಂಡವ ಮೂರ್ತಿ, ಉಮಾತಾಂಡವ ಮೂರ್ತಿ, ಗೌರೀ ತಾಂಡವ ಮೂರ್ತಿ, ಕಾಲಿಕಾ ತಾಂಡವ ಮೂರ್ತಿ, ತ್ರಿಪುರ ತಾಂಡವ ಮೂರ್ತಿ, ಹಾಗೂ ಸಂಹಾರ ತಾಂಡವ ಮೂರ್ತಿ.

### ೧. ಆನಂದ ತಾಂಡವನ ಧ್ಯಾನ

ಶೈವಾಗಮದ ಕಾರಣಾಗಮದಲ್ಲಿನ ವಿವರಗಳಂತೆ ಆನಂದ ತಾಂಡವನಿಗೆ ನಾಲ್ಕು ತೋಳುಗಳು, ಮೂರು ಕಣ್ಣುಗಳು, ಕೆದರಿದ ಜಟೆ, ನವಿಲುಗರಿಗಳನ್ನು ತಲೆಯಲ್ಲಿ ಧರಿಸಿದ್ದಾನೆ. ಎಡಭಾಗದಲ್ಲಿ ಅರ್ಧ ಚಂದ್ರನನ್ನು ಧರಿಸಿದ್ದಾನೆ. ತಲೆಯ ಬಲಭಾಗದ ತುದಿಯಲ್ಲಿ ಗಂಗೆಯನ್ನು ಅಲಂಕರಿಸಿಕೊಂಡಿದ್ದಾನೆ. ಎಡಕಿವಿಯಲ್ಲಿ ಎಲೆಯನ್ನು ಧರಿಸಿದ್ದರೆ, ಬಲಕಿವಿಯಲ್ಲಿ ಮೊಸಳೆಯಾಕಾರದ ಕರ್ಣ ಆಭರಣವನ್ನು ಧರಿಸಿದ್ದಾನೆ. ಜನಿವಾರವನ್ನೂ ಹಾಕಿಕೊಂಡಿದ್ದಾನೆ. ಹುಲಿಯ ಚರ್ಮವನ್ನು ತೊಟ್ಟಿದ್ದಾನೆ. ಎಡಭಾಗದಲ್ಲಿ ಒಂದು ತೋಳನ್ನು ಚಾಚಿದ್ದಾನೆ. ಒಂದು ಬಲಗೈಯಲ್ಲಿ ಅಭಯ ಮುದ್ರೆಯನ್ನು ಹಿಡಿದ್ದಾನೆ. ಮತ್ತೊಂದು ಬಲಗೈಯಲ್ಲಿ ಹಾಗೂ ಎಡಗೈಯಲ್ಲಿ ಡಮರುಗವನ್ನು ಹಿಡಿದಿದ್ದಾನೆ. ಇನ್ನೊಂದು ಎಡಗೈಯಲ್ಲಿ ಬೆಂಕಿಯನ್ನು ಹಿಡಿದಿದ್ದಾನೆ. ತನ್ನ ಬಲಗಾಲನ್ನು ಸ್ವಲ್ಪ ಬಗ್ಗಿಸಿ ಅಪಸ್ಮಾರನೆಂಬ ರಾಕ್ಷಸನ ದೇಹದ ಮೇಲಿಟ್ಟಿದ್ದಾನೆ. ಎಡಗಾಲನ್ನು ದಕ್ಷಿಣ ದಿಕ್ಕಿನೆಡೆಗೆ ಮೇಲೆತ್ತಿದ್ದಾನೆ. ಹೀಗೆ ಆನಂದ ತಾಂಡವನ ಸ್ವರೂಪವನ್ನು ಹೇಳಲಾಗಿದೆ.

### ೨. ಸಂಧ್ಯಾ ತಾಂಡವ ಮೂರ್ತಿಯ ಧ್ಯಾನ

ನಾಲ್ಕು ತೋಳುಗಳ ಸಂಧ್ಯಾ ತಾಂಡವ ಮೂರ್ತಿಗೆ ಮೂರು ಕಣ್ಣುಗಳು. ಕಟ್ಟಿದ ಜಟೆಯಲ್ಲಿ ಕಿರೀಟವನ್ನು ಧರಿಸಿದ್ದಾನೆ. ಬಲಭಾಗದ ಎರಡು ಕೈಗಳಲ್ಲಿ ಅಭಯ ಮುದ್ರೆ ಮತ್ತು ಡಮರುಗಗಳಿವೆ. ಎಡಭಾಗದ ಎರಡು ಕೈಗಳಲ್ಲಿ ನವಿಲುಗರಿ ಮತ್ತು ಆಶ್ಚರ್ಯ ಮುದ್ರೆಗಳಿವೆ. ಎಡಗಾಲಿನ ಪಾದವನ್ನು ಚಾಚಿದ್ದಾನೆ. ಪಾದವು ಸ್ವಲ್ಪ ವಕ್ರವಾಗಿದೆ. ಆದರೆ ಅಪಸ್ಮಾರನೆಂಬ ರಾಕ್ಷಸನು ಆ ಪಾದದ ಕೆಳಗಿಲ್ಲ. ಬಲಗಾಲನ್ನು ಮೇಲೆತ್ತಿದ್ದಾನೆ. ಅದೂ ಸ್ವಲ್ಪ ಓರೆಯಾಗಿದೆ. ಕಾಲುಗಳಿಗೆ ಹಾವುಗಳನ್ನು ಅಲಂಕರಿಸಿ ಕೊಂಡಿದ್ದಾನೆ.

### ೩. ಉಮಾ ತಾಂಡವ ಮೂರ್ತಿ

ಇವನಗೆ ಒಂದು ಮುಖ; ಮೂರು ಕಣ್ಣುಗಳು. ಜಟಾ ಸಮೂಹದಿಂದ ತಲೆಯು ಕಂಗೊಳಿಸುತ್ತಿದೆ. ಮೈಕಾಂತಿಯು ಬಿಳಿ. ಆರು ತೋಳುಗಳ ಉಮಾತಾಂಡವ ಮೂರ್ತಿಗೆ ಬಲಗಡೆಯ ಮೂರು ಕೈಗಳಲ್ಲಿ ಅಭಯ ಮುದ್ರೆ, ಡಮರುಗ ಮತ್ತು

ತ್ರಿಶೂಲ ಇವೆ. ಎಡಗಡೆಯ ಕೈಗಳಲ್ಲಿ ಅಚ್ಚರಿ ಮುದ್ರೆ, ಕಪಾಲ ಮತ್ತು ಆನೆಯ ಸೊಂಡಿಲಿನಂತಿರುವ ಕೈಗಳು ಇವೆ. ತನ್ನ ಎಡಗಾಲನ್ನು ಚಾಚಿ ಅಪಸ್ಮಾರನೆಂಬ ರಾಕ್ಷಸನ ಮೇಲಿಟ್ಟಿದ್ದಾನೆ. ಬಲಗಾಲನ್ನು ಮೇಲೆತ್ತಿದ್ದಾನೆ. ಬಲಗಡೆ ಉಮಾದೇವಿಯಿದ್ದಾಳೆ. ಬಲಭಾಗದ ತಲೆಯಲ್ಲಿ ಗಂಗೆಯನ್ನು ಧರಿಸಿದ್ದಾನೆ. ಎಲ್ಲ ಬಗೆಯ ಆಭರಣಗಳನ್ನು ಅಲಂಕರಿಸಿಕೊಂಡಿದ್ದಾನೆ. ಹುಲಿಯ ಚರ್ಮವನ್ನು ಹೊದ್ದು ಕೊಂಡಿದ್ದಾನೆ.

### ೪. ಗೌರೀತಾಂಡವ ಮೂರ್ತಿ

ಗೌರೀ ತಾಂಡವ ಮೂರ್ತಿಯು ಶಾಂತ ಸ್ವರೂಪನು. ನಾಲ್ಕು ಭುಜಗಳಿವೆ. ದೇಹದ ಬಣ್ಣ ಕೆಂಪು, ಮುಗುಳ್ನಗೆಯ ಮುಖ, ಹರಡಿದ ಜಟೆಯಲ್ಲಿ ಮೂಳೆ, ಬಕಪುಷ್ಪ, ದತ್ತೂರ ಹೂವು, ಎಕ್ಕದ ಹೂವು, ಹಾಗೂ ಬಾಲಚಂದ್ರನನ್ನು ಕಟ್ಟಿದ್ದಾನೆ. ಕೈಗಳಿಗೆ ಹಾವುಗಳನ್ನು ಬಳೆಗಳನ್ನಾಗಿ ಹಾಕಿಕೊಂಡಿದ್ದಾನೆ. ಅಪಸ್ಮಾರನೆಂಬ ರಾಕ್ಷಸನ ಮೇಲೆ ಕುಳಿತಿದ್ದಾನೆ. ತನ್ನ ಬಲಗಾಲನ್ನು ಮಡಿಚಿದ್ದಾನೆ. ಎಡಗಾಲನ್ನು ಮೇಲೆತ್ತಿದ್ದಾನೆ. ತನ್ನ ಬಲಗಡೆಯ ಮೇಲಿನ ಕೈಯಲ್ಲಿ ಅಭಯ ಮುದ್ರೆಯನ್ನು, ಕೆಳಗಡೆಯ ಕೈಯಲ್ಲಿ ಡಮರುಗವನ್ನು, ಎಡಗಡೆಯ ಮೇಲಿನ ಕೈಯಲ್ಲಿ ಸರ್ಪವನ್ನು, ಕೆಳಗಡೆಯ ಕೈಯಲ್ಲಿ ಅಗ್ನಿ ಪಾತ್ರೆಯನ್ನು ಹಿಡಿದಿದ್ದಾನೆ. ತನ್ನ ಎಡಗಡೆಯಲ್ಲಿ ಗೌರಿಯನ್ನು ಕೂರಿಸಿಕೊಂಡಿದ್ದಾನೆ. ಬಲಗಡೆ ನಂದೀಕೇಶ್ವರರು ಇದ್ದಾರೆ. ಅವನ ಕೆದರಿದ ಜಟೆಯು ಎಡಭಾಗದಲ್ಲಿ ಕಟ್ಟಲ್ಪಟ್ಟಿದೆ.

### ೫. ಕಾಲಿಕಾತಾಂಡವ ಮೂರ್ತಿ

ಒಂದು ಮುಖದ ಕಾಲಿಕಾ ತಾಂಡವ ಮೂರ್ತಿಗೆ ಎರಡು ಕಣ್ಣುಗಳು, ಕಟ್ಟಿದ ಜಟಿಯ ಮುಖದ ಈ ಮೂರ್ತಿಗೆ ಎಂಟು ತೋಳುಗಳು. ಬಲಗಡೆಯ ಪಾದವನ್ನು ಮೇಲೆತ್ತಿದ್ದಾನೆ. ಎಡಪಾದವನ್ನು ಮಡಿಚಿದ್ದಾನೆ. ಅಪಸ್ಮಾರನೆಂಬ ರಾಕ್ಷಸನ ಮೇಲೆ ಕುಳಿತಿದ್ದಾನೆ. ಬಲಗಡೆಯ ಕೈಗಳಲ್ಲಿ ಅಭಯ ಮುದ್ರೆ, ತ್ರಿಶೂಲ, ಹಗ್ಗ ಮತ್ತು ಡಮರುಗಗಳನ್ನು, ಕಪಾಲ, ಬೆಂಕಿಯಿರುವ ಪಾತ್ರೆ, ಘಂಟೆ, ಮತ್ತು ವರದ ಮುದ್ರೆಗಳನ್ನು ಎಡಗಡೆಯ ಕೈಗಳಲ್ಲಿ ಹಿಡಿದಿದ್ದಾನೆ. ಅವನ ಬಲಗೈ ಆನೆಯ ಸೊಂಡಿಲಿನಂತಿದ್ದು ಅದು ದಕ್ಷಿಣ ದಿಕ್ಕಿಗೆ ಚಾಚಲ್ಪಟ್ಟಿದೆ.

### ೬. ತ್ರಿಪುರತಾಂಡವ ಮೂರ್ತಿ

ಹದಿನಾರು ತೋಳುಗಳ ಈ ನೃತ್ಯ ರೂಪೀ ಶಿವನಿಗೆ ಬಲಗಡೆಯ ತೋಳುಗಳಲ್ಲಿ ಅಭಯ ಮುದ್ರೆ, ಡಮರುಗ, ವಜ್ರಾಯುಧ, ಶೂಲ, ಪಾಶ, ಉಳಿ, ದಂಡ, ಮತ್ತು ಹಾವುಗಳನ್ನು ಹಿಡಿದಿದ್ದಾನೆ. ಉಳಿದ ಕೈಗಳಲ್ಲಿ ಬೆಂಕಿ, ಪುಸ್ತಕ, ವರದ ಮುದ್ರೆ, ಬಾವುಟ, ಗುರಾಣಿ, ಘಂಟೆ, ಕಪಾಲಗಳನ್ನು ಹಿಡಿದಿದ್ದಾನೆ.

### ೭. ಸಂಹಾರತಾಂಡವ ಮೂರ್ತಿ

ಮೂರು ಕಣ್ಣು, ಎಂಟು ತೋಳುಗಳ ಈ ಸಂಹಾರ ಮೂರ್ತಿಗೆ ಹೆಣೆದ ಜಟೆಗಳು ಹರಡಿಕೊಂಡಿವೆ. ಎಡಪಾದವು ಮಡಿಚಿದೆ. ಬಲಪಾದವು ಅಪಸ್ಮಾರನೆಂಬ ರಾಕ್ಷಸನ ಮೇಲೆ ಇದೆ. ಎಡಗಾಲನ್ನು ಮೇಲಕ್ಕೆ ಎತ್ತಿಕೊಂಡಿದೆ. ಹುಲಿಯ ಚರ್ಮವನ್ನು ಹೊದ್ದಿದೆ. ಬಲಗೈಗಳಲ್ಲಿ ಅಭಯ ಮುದ್ರೆ, ಶೂಲ, ಪಾಶ, ಮತ್ತು ಡಮರುಗಗಳಿವೆ. ಎಡಗೈಗಳಲ್ಲಿ ಕಪಾಲ, ಅಗ್ನಿಯ ಪಾತ್ರೆ, ಆಶ್ಚರ್ಯ ಮುದ್ರೆ, ಮತ್ತು ಆನೆಯ ಸೊಂಡಿಲಿನಂತಿರುವ ಕೈಗಳಿವೆ. ಆನೆಯ ಸೊಂಡಿಲಿನಂತಿರುವ ಮಡಿಚಿರುವ ಕೈ ಎಡಗಡೆಗೆ ಮುಖ ಮಾಡಿಕೊಂಡಿದೆ. ಬಲಭಾಗದಲ್ಲಿ ನಂದೀಶ, ಎಡಭಾಗದಲ್ಲಿ ಗೌರಿಯು ಇದ್ದಾಳೆ. ಹಾಗೇ ನೋಡಿದರೆ ಶೈವಾಗಮಗಳು ಶಿವತಾಂಡವವನ್ನು ೧೫ ಎಂದೂ ವಿಶ್ಲೇಷಿಸಿವೆ. ಅವುಗಳಲ್ಲಿ ಪ್ರಾಧಾನ್ಯ ಪಡೆದಿರುವ ತಾಂಡವಗಳು ಏಳು.

೧. ಕಲಿತ ತಾಂಡವ

೨. ಉಮಾ ತಾಂಡವ (ಅಥವಾ ಗೌರೀ ತಾಂಡವ)

೩. ಸಂಧ್ಯಾ ತಾಂಡವ

೪. ಸಂಹಾರ ತಾಂಡವ

೫. ತ್ರಿಪುರ ತಾಂಡವ

೬. ಊರ್ಧ್ವ ತಾಂಡವ

೭. ಆನಂದ ತಾಂಡವ

ಕಲಿತ ತಾಂಡವವು ಸೃಷ್ಟಿಯ ಸಂಕೇತ ಎಂದು ಹೇಳಲಾಗಿದೆ.

ಉಮಾ ತಾಂಡವ ಮತ್ತು ಸಂಧ್ಯಾ ತಾಂಡವಗಳು ವಿಶ್ವದ ಸ್ಥಿರತ್ವ ಮತ್ತು ಪರಿರಕ್ಷಣೆಯ ಸಾಂಕೇತಿಕ ರೂಪಗಳು. ಸಂಧ್ಯಾ ತಾಂಡವ ನೃತ್ಯವನ್ನು ಶಿವನು ಸಂಗೀತವಾದ್ಯಗಳನ್ನು ನಿರ್ಮಿಸುವ ಸಂದರ್ಭದಲ್ಲಿ ಅಶ್ವತ್ಥ ವೃಕ್ಷದಡಿಯಲ್ಲಿ ನರ್ತಿಸುತ್ತಾನೆ ಎಂದು ಉಲ್ಲೇಖಿಸಲಾಗಿದೆ.

ಸಂಹಾರ ತಾಂಡವವು ಪ್ರಳಯದ ಸಂಕೇತ. ಇಲ್ಲಿ ಶಿವನ ನೃತ್ಯವು ಉಮೆಯೊಡನೆ ನಡೆಯುವುದು.

ತ್ರಿಪುರ ತಾಂಡವವು ವಿಶ್ವದ ತಿರೋಧಾನವನ್ನೂ ಪ್ರತಿನಿಧಿಸುತ್ತದೆ.

ಊರ್ಧ್ವ ತಾಂಡವವು ಮಹೇಶನ ಅನುಗ್ರಹ ಭಾವವನ್ನು ಪ್ರತಿನಿಧಿಸುತ್ತದೆ.

ಆನಂದ ತಾಂಡವವು ವಿಶ್ವದ ಸೃಷ್ಟಿ ಇತ್ಯಾದಿ ಕ್ರಿಯಾ ಪಂಚಕದ ಸಮಾಹಾರ ರೂಪವಾದದ್ದು; ಸೃಷ್ಟಿ, ಸ್ಥಿತಿ, ಪ್ರಳಯ, ತಿರೋಧಾನ, ಅನುಗ್ರಹ ಸಮಸ್ತವನ್ನೂ ಒಳಗೊಂಡದ್ದು.

ಬಹುತೇಕ ದಕ್ಷಿಣ ಭಾರತದ ದೇವಾಲಯಗಳಲ್ಲಿ ಪೂಜಿಸಲ್ಪಡುತ್ತಿರುವ ನಟರಾಜ ಮೂರ್ತಿಯೇ ಆನಂದ ತಾಂಡವ. ಆನಂದ ಕುಮಾರ ಸ್ವಾಮಿಯವರನ್ನು ಕಾಡಿದ ಈ ನೃತ್ಯ ತಾಂಡವ ಮೂರ್ತಿ ವಿಖ್ಯಾತ.

ತಂತ್ರಶಾಸ್ತ್ರಗಳಲ್ಲಿ ಸಪ್ತವಿದ ನಟರಾಜನ ರೂಪಗಳಿವೆ. ಅಜಪಾ, ಉನ್ಮತ್ತ, ಪಾರಾವಾರ ತರಂಗ, ಕುಕ್ಕುಟ, ಭೃಂಗ, ಕಮಲ, ಹಂಸಪಾದ (ಅಥವಾ ಅಮೃತ). ಆನಂದ ತಾಂಡವವನ್ನು ತಂತ್ರ ಪಠ್ಯಗಳು ನಾದಾಂತ ನಟನವೆಂದು ಕರೆದು ಅಜಪಾದಿ ನರ್ತನಗಳೆಲ್ಲದರ ಸಮಾಹಾರ ಅಥವಾ ಪರ್ಯವಸಿತ ರೂಪವೆಂದು ವರ್ಣಿಸಿವೆ. ದೇವನಹಳ್ಳಿಯ ಚೆನ್ನಕೇಶವ ಆಚಾರ್ಯರು ಶಿವನ ನೃತ್ಯ ಭಂಗಿಗಳ ಹಲವು ರೂಪಗಳನ್ನು ರೇಖಿಸಿ ಆನಂದಿಸಿದ್ದಾರೆ. ಅವರ ಈ ರೇಖಾಚಿತ್ರಗಳ ಮೂಲ ಉದ್ದೇಶವೇ ಉಬ್ಬು ಶಿಲ್ಪ ಸೃಷ್ಟಿಗೆ ಪೂರಕವಾಗಿರುವಿಕೆ. ಬಹುತೇಕ ಈ ರೇಖಾಚಿತ್ರಗಳು ಕರಡು ರೇಖಾ ಚಿತ್ರಗಳಂತೆಯೇ ಇವೆ. ಅವರ ಊರ್ಧ್ವ ತಾಂಡವ ಮೂರ್ತಿ ರೇಖಾಚಿತ್ರವು ಗಮನಾರ್ಹವಾಗಿದೆ.

❑




ಸಮತಾಂಡವಮೂರ್ತಿ
ಇಂದ್ರ
ಚಂದ್ರ
ಅರ್ಧನಾರೀಶ್ವರ
ಸೂರ್ಯ




ಶ್ರೀ ಮಧ್ಯ ತಾಂಡವಮೂರ್ತಿ
ಬ್ರಹ್ಮ
ಹರಿ
ತುಂಬುರ
ನಾರದ

ಪಾರ್ಶ್ವತಾಂಡವ



# ೧೧. ನವ ನಾಗ ಲಕ್ಷಣಗಳು

ನಮ್ಮ ಪರಂಪರೆಯಲ್ಲಿ, ಶಿಲ್ಪ ಪಠ್ಯಗಳಲ್ಲಿ ನಾಗದೇವತೆಯ ಪ್ರತಿಮಾ ವಿಕಾಸವು ಸುಸ್ಪಷ್ಟವಾಗಿದೆ. ಶಾಕ್ತ, ಶೈವ, ವೈಷ್ಣವ, ಬೌದ್ಧ, ಜೈನ ಇತ್ಯಾದಿ ಎಲ್ಲ ಧರ್ಮ ಸಂಪ್ರದಾಯಗಳಲ್ಲೂ ನಾಗದೇವತೆಗಳ ಪ್ರತಿಮೆಗಳ ವಿವರಗಳಿವೆ. ಶಿಲ್ಪರತ್ನದಲ್ಲಿ ನವ ನಾಗಗಳಾದ ಅನಂತ, ವಾಸುಕಿ, ಕರ್ಕೋಟ, ತಕ್ಷಕ, ಪದ್ಮನು, ಮಹಾಪದ್ಮನು ಶಂಖ, ಶೇಷ, ಗುಳಿಕಗಳ ಲಕ್ಷಣಗಳಿವೆ. **ಅನಂತೋ ಸುಂದರರೂಪಂ ಫಣಿನಾಂ ಸಪ್ತವಾಸುಕಿ, ಕರಾಳ ರೂಪೋ ಕರ್ಕೋಟ, ತಕ್ಷಕ ಶ್ಯಾಂತ ರೂಪಿಣಃ, ಪದ್ಮಾ ಸನಸ್ತು ಪದ್ಮರೂಪಂಚ, ಮಹಪದ್ಮ ತ್ರಿಶೀರ್ಷಕೇ, ಶಂಖರೂಪಸ್ತು ಶಂಖಶ್ಚ, ಪಂಚ ಶೀರ್ಷಸ್ತು ಶೇಷಕಃ, ಗುಳಿಕೋ ಕುಂಡ ರೂಪಂಚ, ನವನಾಗ ಪ್ರಕೀರ್ತಿತಾಃ. ಇತಿ ಲಕ್ಷಣ ರೂಪಸ್ತು ಕಾರಯೇತ್ಸಕಳಾಂಷಕೇ ಕಶ್ಯಪೋ ಬ್ರಹ್ಮಪುತ್ರಶ್ಚ ಮಾತಾಖದ್ರುವ ಮೇವಚ ಏತಸ್ವಾರ್ಪಾಣಿ ಸಂಪೂಜ್ಯ ತತ್ಫಲಂ ಶಿಲ್ಪರತ್ನಕೇ. ೧. ಅನಂತ :** ಈ ಸರ್ಪವು ಅತಿ ಸುಂದರವಾದ ರೂಪವನ್ನು ಹೊಂದಿದೆ. ಒಂದೇ ಹೆಡೆಯ ಆಕರ್ಷಕ ರೂಪದ 'ಅನಂತ' ಸರ್ಪದ ವಿಗ್ರಹವು ಕನಿಷ್ಠ ಒಂಬತ್ತು ಇಂಚು ಹದಿನೆಂಟು ಇಂಚು, ಇಪ್ಪತ್ತೊಂದು ಇಂಚು ಅಥವಾ ನಲ್ವತ್ತೆಂಟು ಇಂಚುಗಳ ಪ್ರಮಾಣದಲ್ಲಿ ಕೃಷ್ಣಶಿಲೆಯಲ್ಲಿ ರೂಪಿಸಿ ಪೂಜಿಸಲಾಗುತ್ತದೆ.

**೨. ವಾಸುಕಿ :** ಈ ಸರ್ಪವು ೭ ಹೆಡೆಗಳೊಂದಿಗೆ ತೀಕ್ಷ್ಣವಾದ ನೋಟದಿಂದ ಭಕ್ತಿಭಾವನೆ ನೀಡುತ್ತದೆಂದು ಹೇಳಲಾಗಿದೆ. ಈ ಸರ್ಪದ ವಿಗ್ರಹ/ಶಿಲ್ಪವನ್ನು ೭ ಇಂಚು, ೯ ಇಂಚು, ೧೧ ಇಂಚು ಅಥವಾ ೨೨ ಇಂಚುಗಳ ಪ್ರಮಾಣದಲ್ಲಿ ರೂಪಿಸಲಾಗುತ್ತದೆ.

**೩. ಕರ್ಕೋಟ :** ಈ ಸರ್ಪವು ಕರಾಳ ರೂಪದಿಂದ ಭೀಕರವಾಗಿ ಕಾಣುವುದು. ತಕ್ಷಕನೊಂದಿಗೆ ಮಿಥುನ ಶಿಲ್ಪಾಕಾರದಲ್ಲಿ ಇರುವ ಈ ಸರ್ಪವು ೬ ಇಂಚು, ೧೨ ಇಂಚು ಅಥವಾ ೨೪ ಇಂಚುಗಳ ಪ್ರಮಾಣದ ಪ್ರತಿಮೆಯನ್ನು ರೂಪಿಸಲಾಗುತ್ತದೆ.

**೪. ತಕ್ಷಕ :** ಶಾಂತರೂಪನಾದ ಒಂದು ಹೆಡೆಯ ಈ ಸರ್ಪವು ಕರ್ಕೋಟಕನೊಂದಿಗೆ ಮಿಥುನ ಕ್ರಿಯೆಯಲ್ಲಿ ತೊಡಗಿರುವಂತೆ ಶಿಲ್ಪಿಸಲಾಗುತ್ತದೆ. ಸುಮಾರು ೩ ಇಂಚು, ೯ ಇಂಚು ಅಥವಾ ೧೮ ಇಂಚು ಎತ್ತರದ ಕೃಷ್ಣಶಿಲೆಯಲ್ಲಿ ವಿಗ್ರಹವನ್ನು ರೂಪಿಸಲಾಗುತ್ತದೆ.

**೫. ಪದ್ಮನು :** ಪದ್ಮಾಸನ ಸ್ಥಿತಿಯಲ್ಲಿರುವ ಈ ಸರ್ಪವು ಒಂದು ಹೆಡೆಯನ್ನು ಹೊಂದಿರುತ್ತದೆ. ಸುಮಾರು ೯ ಇಂಚು, ೧೧ ಇಂಚು, ೨೮ ಇಂಚು ಎತ್ತರದ ಶಿಲೆಯಲ್ಲಿ ಪದ್ಮನಶಿಲ್ಪವನ್ನು ಸೃಷ್ಟಿಸಲಾಗುತ್ತದೆ.

**೬. ಮಹಾಪದ್ಮನು :** ಈ ಸರ್ಪ ರೂಪವು ೩ ಹೆಡೆಗಳನ್ನು ಹೊಂದಿದ್ದು ಸುಂದರವಾಗಿರುತ್ತದೆ; ಸ್ವಭಾವವೂ ಸುಂದರ. ನಿಂತಿರುವ ಅಥವಾ ಪದ್ಮಾಸನ ಸ್ಥಿತಿಯಲ್ಲಿ ೩ ಇಂಚು, ೭ ಇಂಚು, ೧೬ ಇಂಚು ಅಥವಾ ೩೨ ಇಂಚುಗಳ ಎತ್ತರದ ಕೃಷ್ಣಶಿಲೆಯಲ್ಲಿ ರೂಪಿಸಲಾಗುತ್ತದೆ.

**೭. ಶಂಖ :** ಈ ಸರ್ಪ ರೂಪವು ಶಂಖಾಕಾರದಲ್ಲಿದ್ದು ವಿಶಿಷ್ಟ ರೂಪವನ್ನು ಹೊಂದಿದೆ. ೧೧ ಇಂಚು ಅಥವಾ ೧೨ ಇಂಚುಗಳ ಎತ್ತರದ ಕೃಷ್ಣಶಿಲೆಯಲ್ಲಿ ಶಿಲ್ಪಿಸಲಾಗುತ್ತದೆ.

**೮. ಶೇಷ :** ಐದು ಹೆಡೆಗಳ ಅದ್ಭುತ ರೂಪಿಯಾದ ಈ ಶೇಷಮೂರ್ತಿಯ ಸೌಂದರ್ಯವು ಆಕರ್ಷಕ. ೬ ಇಂಚು, ೧೨ ಇಂಚು ಅಥವಾ ೨೪ ಇಂಚು ಮೂರ್ತಿಯನ್ನು ರೂಪಿಸಲಾಗುತ್ತದೆ.

**೯. ಗುಳಿಕ :** ಕುಂಡರೂಪದ ಈ ಗುಳಿಕ ಸರ್ಪವು ಒಂದು ಹೆಡೆಯನ್ನು ಹೊಂದಿರುತ್ತದೆ. ೬ ಇಂಚು, ೯ ಇಂಚು, ೧೮ ಇಂಚು ಅಥವಾ ೨೧ ಇಂಚುಗಳ ಪ್ರಮಾಣದ ಶಿಲ್ಪವನ್ನಾಗಿಸಲಾಗುತ್ತದೆ. ಈ ನವ ನಾಗಶಿಲ್ಪಗಳನ್ನು ಆಗಮ–ಶಿಲ್ಪಶಾಸ್ತ್ರಗಳಲ್ಲಿ ಸೂಚಿಸಿರುವಂತೆ ಗ್ರಾಮ/ಪಟ್ಟಣಗಳ ಸಾಮೂಹಿಕ ನಿರ್ಮಾಣವಾದ ಅಶ್ವತ್ಥ ವೇದಿಕೆಯ ಮೇಲೆ ಬೇವು, ಅರಳಿ ವೃಕ್ಷಗಳ ಕೆಳಗೆ ಪ್ರತಿಷ್ಠಾಪಿಸಬೇಕು. ಹಾಗೆಯೇ ಸುಬ್ರಹ್ಮಣ್ಯ ಕ್ಷೇತ್ರ, ನಾಗ ಸಮುದಾಯ ಕ್ಷೇತ್ರಗಳಲ್ಲಿ ಅಥವಾ ಶಿವಾಲಯಗಳಲ್ಲಿ ಪ್ರತಿಷ್ಠಾಪಿಸ ಬಹುದು. ಎಲ್ಲಾ ಒಂಬತ್ತು ವಿಗ್ರಹಗಳನ್ನೂ ಪ್ರತಿಷ್ಠಾಪಿಸಬಹುದು. ತಕ್ಷ – ಕಾರ್ಕೋಟಕ, ವಾಸುಕೀ ಸಹಿತ ಮಾನಸಾ ದೇವಿಯನ್ನೂ ಪ್ರತಿಷ್ಠಾಪಿಸುವುದು ಸಾಮಾನ್ಯವಾಗಿದೆ. **ಶಿಲ್ಪರತ್ನದಲ್ಲಿ ನವನಾಗ ಪೂಜಾ ಫಲಗಳು :** ಅನಂತೋ ಪುತ್ರಿದಾಯಶ್ಚ ವಾಸುಕೀ ಪುತ್ರದಾಯಕಃ, ಕಾರ್ಕೋಟ ಕುಷ್ಟು ರೋಗಶ್ಚ, ತಕ್ಷಕಃ ಬಲದಾಯಕಃ, ಪದ್ಮಸ್ತು ಧನಸಂಪತ್ತಿ, ಮಹಾಪದ್ಮಸ್ತು ಮೋಕ್ಷದಾ, ಶಖಂ ಕರ್ಣರೋಗಶ್ಚ, ಗುಳಿಕಂ ನೇತ್ರ ರೋಗಕಃ, ಶೇಷಸ್ತು ಸರ್ವ ಪಾಪಾನಿ, ಕಾರಯೇತ್ ಶಿಲ್ಪರತ್ನಕೇ ॥

❑

---

*ಹೆಚ್ಚಿನ ವಿವರಗಳಿಗೆ ಗಮನಿಸಿ :* **ನವನಾಗ ಲಕ್ಷಣಗಳು, ಶಿಲ್ಪಿ ಕೆ.ಬಿ. ಶಂಕರನಾರಾಯಣ, ಶಿಲ್ಪಕಲಾ ಶಾಲೆ ಟ್ರಸ್ಟ್, ದೇವನಹಳ್ಳಿ, ಬೆಂಗಳೂರು ಗ್ರಾ. ಜಿಲ್ಲೆ**


ಅನಂತ
ವಾಸುಕಿ
ಕರ್ಕೋಟಕ
ತಕ್ಷಕ
ಗುಳಿಕ



ಶೇಷನಾಗ



# ೧೨. ಲಕ್ಷ್ಮಿ

**ಅರುಣ ಕಮಲ ಸಂಸ್ಥಾತದ್ರಜ ಪುಂಜವರ್ಣಾ**
**ಕರಕಮಲ ಧೃತೇಷ್ಟಾಭಿತಿಯು ಗ್ಮಾಂಬುಜಾಚ**
**ಮಣಿ ಮಕುಟ ವಿಚಿತ್ರಾಲಂಕೃತ ಕಲ್ಪಜಾತೈ**
**ರ್ಭವತು ಭುವನಮಾತಾ ಸಂತತಂ ಶ್ರೀಃ ಶ್ರಿಯೈನಃ ॥**

*– ಮಹಾಲಕ್ಷ್ಮೀ ರತ್ನ ಕೋಶ*

ಲಕ್ಷ್ಮೀಯು ವಿಷ್ಣುವಿನ ಪತ್ನಿಯಾಗಿರುವುದರಿಂದ, ಶಕ್ತಿಯೂ ಆಗಿರುವುದರಿಂದ ಐಸಿರಿ ಮತ್ತು ಸಮೃದ್ಧಿಯ ಸಾಂಕೇತಿಕ ರೂಪವೇ ಆಗಿದ್ದಾಳೆ. ವೇದಗಳಲ್ಲಿ ಧ್ಯಾನಿಸಲ್ಪಟ್ಟಿರುವ 'ಶ್ರೀ' ಅಥವಾ 'ಲಕ್ಷ್ಮೀ' ಐಶ್ವರ್ಯ ಮತ್ತು ಅದೃಷ್ಟದ ಶಕ್ತಿ ಮತ್ತು ಸೌಂದರ್ಯದ ದೇವತೆಯೇ ಆಗಿದ್ದಾಳೆ. ಪುರಾಣಗಳ ಪ್ರಕಾರ ಲಕ್ಷ್ಮಿಯು ತನ್ನ ಮೊದಲ ಅವತಾರದಲ್ಲಿ ಭೃಗು ಮತ್ತು ಅವನ ಪತ್ನಿಯಾದ ಖ್ಯಾತಿಯ ಮಗಳಾಗಿ ಹುಟ್ಟಿದಳು. ಆ ನಂತರ ಸಮುದ್ರ ಮಥನದ ಕಾಲದಲ್ಲಿ ಕ್ಷೀರಸಾಗರದಿಂದ ಹುಟ್ಟಿದಳು. ವಿಷ್ಣುವಿನ ಪತ್ನಿಯಾಗಿರುವುದರಿಂದ ಆಕೆಯು ಅವನ ಪತ್ನಿಯಾಗಿ ತಾನೂ ಅವತರಿಸಿದಳು. ವಿಷ್ಣುವು ವಾಮನ, ಪರಶುರಾಮ, ರಾಮ ಮತ್ತು ಕೃಷ್ಣನಾಗಿ ಅವತರಿಸಿದಾಗ ಆಕೆಯು ಪದ್ಮಾ, ಧರಣೀ, ಸೀತಾ ಮತ್ತು ರುಕ್ಮಿಣಿಯಾಗಿ ಹುಟ್ಟಿದಳು.

ಪ್ರತಿಮಾಪತ್ಯದ ಕೃತಿಗಳಲ್ಲಿ ಲಕ್ಷ್ಮಿಯ ಎಂಟು ಪ್ರಕಾರಗಳನ್ನು (ಅಷ್ಟಮಹಾಲಕ್ಷ್ಮೀ) ಉಲ್ಲೇಖಿಸಲಾಗಿದೆ. ಆದ್ಯಲಕ್ಷ್ಮೀ, ವಿದ್ಯಾಲಕ್ಷ್ಮೀ, ಸಂತಾನಲಕ್ಷ್ಮೀ, ಸೌಭಾಗ್ಯಲಕ್ಷ್ಮೀ, ಧನಲಕ್ಷ್ಮೀ, ವೀರ್ಯಲಕ್ಷ್ಮೀ, ವಿಜಯಲಕ್ಷ್ಮೀ, ಮತ್ತು ಮಹಾಲಕ್ಷ್ಮೀ ಎಂಬ ಹೆಸರುಗಳು ಒಂದು ಕ್ರಮವಾದರೆ, ಆದಿಲಕ್ಷ್ಮೀ, ಸಂತಾನಲಕ್ಷ್ಮೀ, ಗಜಲಕ್ಷ್ಮೀ, ಧನಲಕ್ಷ್ಮೀ, ಧಾನ್ಯಲಕ್ಷ್ಮೀ, ವಿಜಯಲಕ್ಷ್ಮೀ, ಐಶ್ವರ್ಯಲಕ್ಷ್ಮೀ, ವೀರಲಕ್ಷ್ಮೀ ಎಂಬ ಮತ್ತೊಂದು ಪರಿಗಣನಾಕ್ರಮವೂ ಇದೆ. ಇವುಗಳಲ್ಲಿ ಗಜಲಕ್ಷ್ಮೀ ಎಂಬ ರೂಪ ಪ್ರಕಾರವು ತುಂಬಾ ಜನಪ್ರಿಯವಾದುದು.

## ಗಜಲಕ್ಷ್ಮಿ

ಪಾಂಚರಾತ್ರಾಗಮದಲ್ಲಿ ಧ್ಯಾನಿಸಿರುವಂತೆ ದೇವಿಲಕ್ಷ್ಮಿಯು ಬಿಳಿಯ ವಸ್ತ್ರ ಉಟ್ಟ ಅಪ್ರತಿಮ ರೂಪವುಳ್ಳವಳೆಂದು ಹೇಳಲಾಗಿದೆ. ಹಾಗೆಯೇ ಚತುರ್ಭುಜಳಾದ ದೇವಿಯನ್ನು ಕುಳಿತಿರುವಂತೆ ಚಿತ್ರಿಸಬೇಕು. ಇವಳ ಸಿಂಹಾಸನದಲ್ಲಿ ಸುಂದರ ಕರ್ಣಿಕೆಯ (ಬೀಜಕೋಶ) ಕಮಲವನ್ನು  ಚಿತ್ರಿಸಬೇಕು. ಎಂಟುದಳಗಳ ಕಮಲದ ಕರ್ಣಿಕೆಯ ಮೇಲೆ ದೇವಿಯು ಕುಳಿತಿರಬೇಕು ಅವಳ ಹಸ್ತದಲ್ಲಿ ಮಂಗಳಕರವಾದ ಉದ್ದವಾದ ನಾಲವಿರುವ ಒಂದು ಕಮಲವಿರಬೇಕು. ಆ ಕಮಲವು ಬಲಭಾಗದಲ್ಲಿ ಕೇಯೂರವಿರುವ ಜಾಗದಲ್ಲಿರು ವಂತೆ ಚಿತ್ರಿಸಬೇಕು. ವಾಮ ಭಾಗದಲ್ಲಿ ಆಕರ್ಷಕವಾದ ಅಮೃತಘಟವನ್ನು ರಚಿಸಬೇಕು. ಅವಳ ಇತರ ಎರಡು ಕೈಗಳಲ್ಲಿ ಬಿಲ್ವ ಫಲ ಮತ್ತು ಶಂಖಗಳು ಇರಬೇಕು. ದೇವಿಯ ಹಿಂಭಾಗದಲ್ಲಿ ಸೊಂಡಿಲುಗಳನ್ನು ತಿರುವಿಕೊಂಡಿರುವ ಎರಡು ಆನೆಗಳನ್ನು ಚಿತ್ರಿಸಬೇಕು. ದೇವಿಯ ತಲೆಯ ಅವಕಾಶದ ಮೇಲೆ ಆಕರ್ಷಕವಾದ ಒಂದು ಕಮಲ ಇರಬೇಕು. ದೇವಿಯು ಸ್ವರ್ಣ ವರ್ಣದಲ್ಲಿ ಚಿತ್ರಿಸಲ್ಪಡಬೇಕು ಎಂದು ವಿವರಿಸಲಾಗಿದೆ.

## ಮಹಾಲಕ್ಷ್ಮೀ

ನೃಸಿಂಹ ಪ್ರಾಸಾದದಲ್ಲಿ ಮಹಾಲಕ್ಷ್ಮಿಯ ರೂಪವನ್ನು ವಿಶ್ವಕರ್ಮನು ಹೇಳಿರುವಂತೆ ವಿವರಿಸಲಾಗಿದೆ. ಆ ವಿವರಗಳನ್ನೇ ಮುಮ್ಮಡಿ ಕೃಷ್ಣ ರಾಜ ಒಡೆಯರ (ಕ್ರಿ.ಶ. ೧೭೯೪ – ೧೮೬೮) ಶಕ್ತಿ ನಿಧಿಯಲ್ಲಿ ಉಲ್ಲೇಖಿಸಲಾಗಿದೆ.

ಕೊಲ್ಹಾಪುರ ಕ್ಷೇತ್ರದಲ್ಲಿ ಧನ್ಯ ಸ್ವರೂಪಿಣಿಯಾದ ಮಹಾಲಕ್ಷ್ಮಿಯು ಹೇಗೆ ರೂಪಿಸಲ್ಪಟ್ಟಿರುವಳೋ ಹಾಗೆ ಸರ್ವಾಭರಣ ಭೂಷಿತೆ ಲಕ್ಷ್ಮಿಯಂತೆ ಚಿತ್ರಿಸಬೇಕು.

ಈಕೆಗೆ ನಾಲ್ಕುಕರಗಳು ಕೆಳಗಿನ ಎರಡು ಹಸ್ತಗಳಲ್ಲಿ ಕ್ರಮವಾಗಿ ಪಾನಪಾತ್ರೆ ಹಾಗೂ ಶ್ರೀಫಲ, ಮೇಲಿನ ಎರಡು ಹಸ್ತಗಳಲ್ಲಿ ಕ್ರಮವಾಗಿ ಬಲಹಸ್ತದಲ್ಲಿ ಕೌಮೋದಕೀ, ಗದೆ ಹಾಗೂ ಎಡ ಹಸ್ತದಲ್ಲಿ ಗುರಾಣಿಯು ಚಿತ್ರಿಸಲ್ಪಡಬೇಕು. ತಲೆಯ ಮೇಲೆ ಲಿಂಗವನ್ನು ಅಲಂಕರಿಸಬೇಕು. ಬಂಗಾರದ ವರ್ಣಿಕೆಯ ಚಿತ್ರ ರೂಪಿಯೇ ಮಹಾಲಕ್ಷ್ಮೀ.

## ವೀರಲಕ್ಷ್ಮೀ

ಪಾಂಚರಾತ್ರ ಆಗಮದಲ್ಲಿ ವೀರಲಕ್ಷ್ಮೀ ರೂಪವನ್ನು ಕನಕ ವರ್ಣದಲ್ಲಿ ರೂಪಿಸಬೇಕೆಂದು ಹೇಳಲಾಗಿದೆ, ವರದ ಮತ್ತು ಅಭಯ ಹಸ್ತ ಮುದ್ರೆಗಳನ್ನು ಧರಿಸಿ ಮೇಲ್ಭಾಗದ ಎರಡು ಕೈಗಳಲ್ಲಿ ಕಮಲಗಳನ್ನು ಧರಿಸಿ, ಪದ್ಮಾಸನದಲ್ಲಿ ಕುಳಿತಿರುವವಳು ವೀರಲಕ್ಷ್ಮಿಯೆಂದು ಪ್ರಸಿದ್ಧಳಾಗಿದ್ದಾಳೆ, ಎಂದಿದೆ.

ದ್ವಿಭುಜವೀರಲಕ್ಷ್ಮೀ ಧ್ಯಾನದಲ್ಲಿ ಬಲಗೈಯಲ್ಲಿ ಅಭಯ, ಎಡಗೈಯಲ್ಲಿ ವರದ ಮುದ್ರೆಗಳು ಇರುತ್ತವೆ, ತೊಡೆಗಳು ಪದ್ಮದಳಾಕಾರವಾಗಿರುತ್ತವೆ.

ಅಷ್ಟಭುಜಾವೀರಲಕ್ಷ್ಮೀ ವಿವರಣೆಯಲ್ಲಿ ಪಾಶ, ಅಂಕುಶ, ಅಕ್ಷಸೂತ್ರ, ವರ, ಅಭಯ, ಗದಾ, ಪದ್ಮಪಾತ್ರಗಳಿರುವಂತೆ ಚಿತ್ರಿಸಬೇಕು.

## ಪದ್ಮಾಲಕ್ಷ್ಮೀ

ಪಾಂಚರಾತ್ರ ಕ್ರಿಯಾಪಾದದಲ್ಲಿ ಪದ್ಮಲಕ್ಷ್ಮಿಯನ್ನು ವಿಶಿಷ್ಟ ರೀತಿಯಲ್ಲಿ ಧ್ಯಾನಿಸಲಾಗಿದೆ. ಈ ಲಕ್ಷ್ಮಿಯು ಕಮಲಾಸನೆ, ಕುಮುದ ಕಾಂತಿಯುಳ್ಳವಳು. ಪದ್ಮದಲ್ಲಿ ವಾಸಿಸುವವಳು, ಮೊಸಳೆಯ ಆಕಾರದ ಹೊಳಪುಳ್ಳ ಕುಂಡಲವನ್ನು ಕಿವಿಯ ಆಭರಣವನ್ನಾಗಿ ಧರಿಸಿರುವವಳು, ಚಂದ್ರಬಿಂಬದಂತಹ ನಿರ್ಮಲ ಮುಖಿ. ಕಿವಿಯವರೆಗೂ ತುಂಬಿ ದಂತಿರುವ ಆಯತನೇತ್ರೆ, ಯುವತಿ, ಸೊಗಸಾದ ಅಂಗವುಳ್ಳವಳು. ವಕ್ರವಾದ ಹುಬ್ಬುಗಳ, ಶೃಂಗಾರ ಭಾವ ವೈಭವಿ. ತಲೆಯಲ್ಲಿ ಅಲಂಕಾರಕ್ಕಾಗಿ ಶಂಖ, ಚಕ್ರ, ಹಾಗೂ ಬೈತಲೆಗೆ ಪದ್ಮಾಕಾರದ ಆಭರಣಗಳಿವೆ. ಆನೆಯ ಸೊಂಡಿಲಿನಂತೆ ಬಾಹುಗಳಿವೆ. ತಾವರೆ ಮತ್ತು ಬಿಲ್ವದ ಫಲಗಳನ್ನು ಧರಿಸಿರುವಳು, ಸುಂದರವಾದ ವಸ್ತ್ರಗಳನ್ನು ಧರಿಸಿರುವಳು, ಈ ಲಕ್ಷ್ಮಿಯು ಸಂಪತ್ತನ್ನು ವೃದ್ಧಿಗೊಳಿಸುವ ದೇವತೆಯೇ ಆಗಿದ್ದಾಳೆ ಎಂದು ಹೇಳಲಾಗಿದೆ. ಈ ರೂಪವನ್ನು ಪದ್ಮವರ್ಣದಿಂದ ಚಿತ್ರಿಸಬೇಕೆಂದು ಹೇಳಲಾಗಿದೆ.

❑

ವೀರಲಕ್ಷ್ಮೀ



ಗಜಲಕ್ಷ್ಮೀ



# ೧೩. ಷಣ್ಮುಖ ಸುಬ್ರಹ್ಮಣ್ಯ

"ಶಕ್ತಿಂಶರ ಚ ಖಡ್ಗಂಚ ಚಕ್ರಂ ಪಾಶಾಭಯೌತಥಾ।
ಕುಕ್ಕುಟಂ ಚ ಧಮಃ ಖೇಟ ಶಂಖಂಥತ್ತೇಹಲಂ ವರಂ॥
ಮಯೂರ ವಾಹನೋಪೇತಂ ಸರ್ವಲಕ್ಷಣ ಸಂಯುತಂ।
ಜಯಾ ಚ ವಿಜಯಾ ಚೈವವಾಮ ದಕ್ಷಿಣ ಪಾರ್ಶ್ವಯೋಃ॥
ಸರ್ವಾಲಂಕಾರ ಸಂಯುಕ್ತಂ ಸರ್ವಾಭರಣಭೂಷಿತಃ।
ಷಣ್ಮುಖಂ ಚೇತಿ ವಿಖ್ಯಾತಂ ತಾರ ಕಾರಿಮಥ ಶ್ರುಣು॥

*(ಶೈವಾಗಮಕ್ಕೆ ಸೇರಿದ ಸಿದ್ಧಾಂತಶೇಖರದಲ್ಲಿ )*

ಎಂದು ಷಣ್ಮುಖ ಸುಬ್ರಹ್ಮಣ್ಯ ರೂಪದ ಬಗ್ಗೆ ಹೇಳಲಾಗಿದೆ. ಈ ಧ್ಯಾನಶ್ಲೋಕವನ್ನು ಮುಮ್ಮಡಿ ಕೃಷ್ಣರಾಜ ಒಡೆಯರ ಶ್ರೀತತ್ತ್ವನಿಧಿಯ 'ಶಿವನಿಧಿ'ಯಿಂದ ಆರಿಸಿಕೊಳ್ಳಲಾಗಿದೆ. ಪರಿವಾರದೇವತೆಯಾಗಿದ್ದು ಕಾಲಾನಂತರ ಸ್ವಯಂ ಪ್ರಧಾನರಾದ ದೇವತೆಗಳಲ್ಲಿ ಸುಬ್ರಹ್ಮಣ್ಯನು ಗಮನಾರ್ಹನು. ಶಿವನ ಪರಿವಾರದೇವತೆಗಳಲ್ಲಿ ಅವನ ಮಗನಾಗಿಯೂ ಈ ದೇವತೆಗೆ ಪ್ರಮುಖ ಸ್ಥಾನವಿದೆ. ಶೈವಾಗಮದ ಸಿದ್ಧಾಂತ ಶೇಖರದಲ್ಲಿ ಹದಿನೇಳು ಜನ ಸುಬ್ರಹ್ಮಣ್ಯರ ಧ್ಯಾನ ಶ್ಲೋಕಗಳಿವೆ ಅವನ್ನು ಶ್ರೀತತ್ವನಿಧಿಯಲ್ಲಿಯೂ ಉಲ್ಲೇಖಿಸಲಾಗಿದೆ. ಅವುಗಳನ್ನು ಕ್ರಮವಾಗಿ ಜ್ಞಾನಶಕ್ತಿ ಸುಬ್ರಹ್ಮಣ್ಯ, ಸ್ಕಂದಸುಬ್ರಹ್ಮಣ್ಯ, ಅಗ್ನಿಜಾತ ಸುಬ್ರಹ್ಮಣ್ಯ, ಸೌರಭೇಯ ಸುಬ್ರಹ್ಮಣ್ಯ, ಗಾಂಗೇಯ ಸುಬ್ರಹ್ಮಣ್ಯ, ಶರವಣೋದ್ಭವ ಸುಬ್ರಹ್ಮಣ್ಯ, ಕಾರ್ತಿಕೇಯ ಸುಬ್ರಹ್ಮಣ್ಯ, ಕುಮಾರ ಸುಬ್ರಹ್ಮಣ್ಯ, ಷಣ್ಮುಖ ಸುಬ್ರಹ್ಮಣ್ಯ, ತಾರಾಕಾರಿ ಸುಬ್ರಹ್ಮಣ್ಯ, ಸೇನಾನಿ ಸುಬ್ರಹ್ಮಣ್ಯ, ಗುಹ ಸುಬ್ರಹ್ಮಣ್ಯ, ಬ್ರಹ್ಮಚಾರಿ ಸುಬ್ರಹ್ಮಣ್ಯ, ದೇಶಿಕ ಸುಬ್ರಹ್ಮಣ್ಯ, ಕ್ರೌಂಚಭೇಧನ ಸುಬ್ರಹ್ಮಣ್ಯ, ಶಿಖಿವಾಹನ ಸುಬ್ರಹ್ಮಣ್ಯ, ಹಾಗೂ ವೇಲಾಯುಧ ಸುಬ್ರಹ್ಮಣ್ಯ ಎಂದು ಹೇಳಲಾಗಿದೆ.

ಷಣ್ಮುಖ ಅಥವಾ ಸುಬ್ರಹ್ಮಣ್ಯನನ್ನು ಕ್ರಿ.ಶ. ಒಂದನೆಯ ಶತಮಾನದಿಂದ ಐದನೆಯ ಶತಮಾನದವರೆಗಿನ ಶಿಲಾಶಾಸನಗಳಲ್ಲಿ, ನಾಣ್ಯಗಳಲ್ಲಿ ನೋಡಬಹುದಾಗಿದೆಯೆಂದು ಹೇಳಲಾಗಿದೆ. ಚಾಂದ್ರಮಾನ ಮಾಸದ ಷಷ್ಠಿಯನ್ನು ಅವನಿಗೆ ಹಾಗೂ ನಾಗದೇವತೆಗಳಿಗೆ ಪವಿತ್ರವಾದ ದಿನವೆಂದು ಪರಿಗಣಿಸಲಾಗಿದೆ. ವನದೇವಿಯಾದ ವಲ್ಲಿಯಮ್ಮನನ್ನು ಮದುವೆಯಾದ ಷಣ್ಮುಖನ ವಾಹನವು ನವಿಲು. ಹಾಗೆ ನೋಡಿದರೆ ಅವನು ನಾಗಾರಾಧನೆ ಮತ್ತು ವೃಕ್ಷಾರಾಧನೆಗೆ ಸಂಬಂಧಪಟ್ಟ ಒಬ್ಬ ಅರಣ್ಯದೇವತೆಯೆಂದು ಉಲ್ಲೇಖಿಸಲಾಗಿದೆ. ತಾರಕಾಸುರನೆಂಬ ರಾಕ್ಷಸನನ್ನು ಸಂಹರಿಸಲು ಅವನು ಶಿವಪಾರ್ವತಿಯರಿಂದ ಹುಟ್ಟಿದನೆಂದು ಹೇಳಲಾಗಿದೆ. ಮೂರು ಲೋಕಕ್ಕೆ ತಂದೆ ತಾಯಿಯರೆಂದು ವರ್ಣಿಸಲ್ಪಟ್ಟಿರುವ ಶಿವ ಪಾರ್ವತಿಯರೂ ಅವನ ಜನನ ಕಾರಣಕ್ಕಾಗಿ ತೀವ್ರ ತಪಸ್ಸು ಮಾಡಿದ ಸಂದರ್ಭವೇ ಷಣ್ಮುಖ ಸುಬ್ರಹ್ಮಣ್ಯನ ಪ್ರಾಮುಖ್ಯತೆಯನ್ನು ಹೇಳುತ್ತದೆ. ಬಾಣಗಳಂತಿರುವ ಹುಲ್ಲಿನವನದಲ್ಲಿ ಅವನು ಹುಟ್ಟಿದುದರಿಂದ ಶರವಣಭವನೆಂದು, ಕೃತ್ತಿಕಾ ರಾಶಿಯ ಆರು ಜನ ದಿವ್ಯಮಾತೆಯರಿಂದ ಪೋಷಿಸಲ್ಪಟ್ಟ ಕಾರಣದಿಂದ ಕಾರ್ತಿಕೇಯ ಅಥವಾ ಷಣ್ಮಾತುರ, ಆರುಮಾತೆಯರ ಸ್ತನ್ಯಪಾನ ಮಾಡುವ ಕಾರಣಕ್ಕಾಗಿ ಆರು ಮುಖಗಳನ್ನು ಹೊಂದಿದ್ದುದರಿಂದ ಷಣ್ಮುಖ ಅಥವಾ ಷಡಾನನ. ದೇವತೆಗಳ ಸೈನ್ಯಕ್ಕೆ ಅಧಿಪತಿಯಾಗಿದ್ದುದರಿಂದ ದೇವಸೇನಾನಿ. ಶಕ್ತ್ಯಾಯುದದಿಂದ ಅವನು ತಾರಕಾಸುರನನ್ನು ಕೊಂದಿದ್ದರಿಂದ ಶಕ್ತಿಧರ ಮತ್ತು ತಾರಕಾರಿ. ಚಿಕ್ಕವಯಸ್ಸಿನ ಶೂರನಾದುದರಿಂದ ಕುಮಾರ ಅಥವಾ ಸನತ್ಕುಮಾರ, ಒಳ್ಳೆಯ ಯೋಧನಾದುದರಿಂದ ಸ್ಕಂದ, ಬ್ರಾಹ್ಮಣ ಪ್ರಿಯನಾದುದರಿಂದ ಸುಬ್ರಹ್ಮಣ್ಯ. ಕ್ರೌಂಚಪರ್ವತವನ್ನು ಭೇದಿಸಿದುದರಿಂದ 'ಕ್ರೌಂಚಬೇತ್ತ' ಇತ್ಯಾದಿ ಹೆಸರುಗಳೇ ಅಲ್ಲದೆ ಬ್ರಹ್ಮಶಾಸ್ತ, ಗುಹ, ಗಾಂಗೇಯ, ಸ್ವಾಮಿನಾಥ ಎಂಬ ಅಭಿಧಾನಗಳೂ ಹೇಳಲ್ಪಟ್ಟಿವೆ.



ಮೂರ್ತಿಶಿಲ್ಪ ಪ್ರಕಾರದಲ್ಲಿ ಷಣ್ಮುಖನನ್ನು ಒಂದು ತಲೆ, ಎರಡು ಕೈಗಳು ಅಥವಾ ಆರು ತಲೆಗಳು ಮತ್ತು ಹನ್ನೆರಡು ಕೈಗಳು ಇರುವಂತೆ ಗ್ರಹಿಸಲಾಗಿದೆ. ಚಿತ್ರಗಳಲ್ಲಿಯೂ ಈ ನೋಟವನ್ನು ಗಮನಿಸಬಹುದಾಗಿದೆ. ರಾಜಾರವಿವರ್ಮನ ಪ್ರೆಸ್‌ನ ಷಣ್ಮುಖನ ಜನಪ್ರಿಯ ಚಿತ್ರವೂ ಇಲ್ಲಿ ನೆನಪಾಗುತ್ತದೆ; ಇರಲಿ. ಷಣ್ಮುಖನ ಆಯುಧ ಶಕ್ತ್ಯಾಯುಧ ಮತ್ತು ವಾಹನ ನವಿಲು.

ಷಣ್ಮುಖ\ಸುಬ್ರಹ್ಮಣ್ಯನಿಗೆ ಇಬ್ಬರು ಹೆಂಡಿರು ಈ ಮೊದಲೇ ಉಲ್ಲೇಖಿಸಿರುವಂತೆ ವಲ್ಲೀ ಮತ್ತು ದೇವಸೇನಾ. ವಲ್ಲಿಯು ಕೃಷಿ ಮತ್ತು ಕರಕುಶಲ ಕೆಲಸಗಳಲ್ಲಿ ತೊಡಗಿದ ದಸ್ಯುನಾಯಕನ ಮಗಳು. ದೇವಸೇನಾಳು ಇಂದ್ರನ ಮಗಳು. ಹಾಗಾಗಿ ಷಣ್ಮುಖನನ್ನು ಕೆಳ ಮತ್ತು ಮೇಲ್ವರ್ಗದ ಎಲ್ಲ ಜನರೂ ಆರಾಧಿಸುತ್ತಾರೆ. ಪ್ರಸ್ತುತ ಪ್ರಕಟಣೆಯಲ್ಲಿ ದೇವನ ಹಳ್ಳಿಯ ಚೆನ್ನಕೇಶವ ಆಚಾರ್ಯರ ಷಣ್ಮುಖ/ಕುಮಾರ ಸ್ವಾಮಿಯ ರೇಖಾ ಚಿತ್ರರೂಪ ಸಂಯೋಜನೆಗಳು ಮೂರು ಆಯಾಮಗಳ ಶಿಲ್ಪ ಸೃಷ್ಟಿಗೆ ಪೂರಕವಾಗುವಂತೆ ರೇಖಿಸಲಾಗಿವೆ; ಸುಂದರ ಸಂಯೋಜನೆಗಳಾಗಿವೆ.

## ಗುಹ ಸುಬ್ರಹ್ಮಣ್ಯ

**ಚತುರ್ಭುಜಂ ತ್ರಿನೇತ್ರಂ ಚ ಹೇಮರತ್ನ ಕಿರೀಟಮ್ ।**
**ಶೂಲಂ ವಜ್ರಂ ಸವ್ಯವಾಮೇ ವರಾಭಯಕರ ದ್ವಯಮ್ ॥**
**ಶ್ವೇತವಸ್ತ್ರಧರಂ ದೇವಂ ಸರ್ವೇಷಾಂ ರಕ್ಷಣಾರ್ಥಕಮ್ ।**
**ಜಯಯಾ ವಾಮೇಪಾರ್ಶ್ವೇತು ಕಲ್ಯಾಣೋತ್ಸವ ವಿಗ್ರಹಮ್ ।**
**ಪಾದಾಂಬುಜಂ ಹೃದಿ ಧ್ಯಾತ್ವಾ ಗುಹರೂಪಂ ಸಮಾಶ್ರಯೇ ॥**

*– ಶೈವಾಗಮ ಶೇಖರದಲ್ಲಿ*

❑

# ೧೪. ವಿವಿಧ ಸಭಾ ಚಿತ್ರಗಳು



ಷಣ್ಮುಖ ಸಭಾ

ರಾವಣ ಸಭಾ



ಬಲಿ ಚಕ್ರವರ್ತಿ ಸಭಾ



# ಪದಸೂಚಿ



೧೯೪೯ರಲ್ಲಿ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವಾಗಟ ಅಗ್ರಹಾರದಲ್ಲಿ ಜನಿಸಿದ ಕೆ.ವಿ. ಸುಬ್ರಹ್ಮಣ್ಯಂ ದೃಶ್ಯಕಲೆಯ ಇತಿಹಾಸ ವಿಮರ್ಶೆಗಳಿಗೆ ಸಂಬಂಧಿಸಿದ ಸಾಹಿತ್ಯ ಸೃಷ್ಟಿಯಲ್ಲಿ ತೊಡಗಿದ್ದಾರೆ. ಕರ್ನಾಟಕದ ಆಧುನಿಕ ಶಿಲ್ಪಕಲೆ, (೧೯೯೪) ಕನ್ನಡ ಶಿಲ್ಪಕಲೆಯ ಸಮಕಾಲೀನ ದೃಶ್ಯ (೨೦೦೭), ಮೊದಲಾದ ಪುಸ್ತಕಗಳ ಲೇಖಕರು ಇವರು. 'ಇನ್‌ಸ್ಟಾಲೇಷನ್ ಕಲಾ ಪ್ರಪಂಚ' ಪುಸ್ತಕವು ಪುಸ್ತಕ ಪ್ರಾಧಿಕಾರದ ಪ್ರಶಸ್ತಿಗೆ ಪಾತ್ರವಾಗಿದೆ.

ಇವರಿಗೆ ಕರ್ನಾಟಕ ಲಲಿತಕಲಾ ಅಕಾಡೆಮಿ ಗೌರವ ಪ್ರಶಸ್ತಿ, ೧೯೯೯; United Writers Association of India, ಚೆನ್ನೈನ Fellow 2004; ಹರ್ಯಾಣದ ಸುಭದ್ರಾ ಕುಮಾರಿ ಚೌವ್ಹಾಣ್ ಜನ್ಮಶತಮಾನೋತ್ಸವ ಸಮ್ಮಾನ್, ೨೦೦೪; ಕರ್ನಾಟಕ ಚಿತ್ರಕಲಾ ಪರಿಷತ್ತಿನ ಜೀವಮಾನದ ಸಾಧನೆ ಪುರಸ್ಕಾರ, ೨೦೧೪, ಕಲಬುರಗಿಯ ಐಡಿಯಲ್ ಫೈನ್ ಆರ್ಟ್ಸ್ ಸಂಸ್ಥೆಯ 'ದೃಶ್ಯ ಭೂಷಣ' ಪ್ರಶಸ್ತಿ, ೨೦೧೪, ಬೆಂಗಳೂರು ಆರ್ಟ್ ಫೌಂಡೇಷನ್ನಿನ 'ಕಲಾಧ್ಯಾನ್' ಪುರಸ್ಕಾರ, ೨೦೧೫, ವಿ.ಸೀ. ಸಂಪದದ ಪುರಸ್ಕಾರ, ೨೦೧೬ ಮೊದಲಾದವು ಸಂದಿವೆ.





ಕರ್ನಾಟಕ ಶಿಲ್ಪಕಲಾ ಅಕಾಡೆಮಿ

ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು - ೫೬೦ ೦೦೨
E-mail : shilpakala.academy@gmail.com
web : www.karnatakashilpakalaacademy.org
ದೂರವಾಣಿ : ೦೮೦-೨೨೨೭೮೭೨೫